# 33

# ದರ್ಶನದ ಕಥೆಗಳು

೧. ಜಿನದತ್ತ ಸೆಟ್ಟಿ.

೨. ಸತ್ಯವ್ರತ.



ಲೇಖಕರು:

ಬಿ. ಶಂಕರ ಭಟ್ಟ ಮತ್ತು ಬಿ. ಎಂ. ಶರ್ಮಾ

ಮಂಗಳೂರು.

1955.

ಒಂದಾಣೆ


ಮಾಲೆ

# ಒಂದಾಣೆ ಮಾಲೆಯಲ್ಲಿ ಈ ವರೆಗೆ ಪ್ರಕಟವಾದ ಪುಸ್ತಕಗಳು

೧. *ಕೆಪ್ಪಟಿರಾಯ (ವಿನೋದ ಕಥೆ) ಲೇ: ದಿ| ಎಮ್. ಎನ್. ಕಾಮತ್.
೨. ನಾರೀಶ್ವರರು (ಏಕಾಂಕ ಪ್ರಹಸನ)
೩. *ಕಳ್ಳನಿಗೆ ಸಂಭಾವನೆ ಮತ್ತು ಇತರ ಕಥೆಗಳು.
೪. *ಸದ್ರಿಸುಬ್ಬ (ಏಕಾಂಕ ಪ್ರಹಸನ) ಲೇ: ದಿ| ಎಮ್. ಎನ್. ಕಾಮತ್.
೫. *ಅದ್ಭುತ ತ್ಯಾಗ ಮತ್ತು ಇತರ ಕಥೆಗಳು (ವೈದ್ಯಗುರು ಎಮ್. ಆರ್. ಭಟ್.)
೬. ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ)
೭. 'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು)
೮. ಇಂಗ್ಲಿಷ್-ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ)
೯. *ಲಂಚಕ್ಕೆ ಸಂಚಕಾರ (ಡಾ| ಎಸ್. ಪಿ. ಭಟ್.)
೧೦. ಟಶ್ಯೂ ಔಷಧಿಗಳ ಕೈಪಿಡಿ. (ಶ್ರೀ| ಪಿ. ಎಸ್. ವೆಂಕಟಕೃಷ್ಣರಾವ್.)
೧೧. ಶ್ರೀಕ್ಷೇತ್ರ ಧರ್ಮಸ್ಥಳ (ದ್ವಿತೀಯ ಮುದ್ರಣ)
೧೨. ಜೀವದ ಮೌಲ್ಯ ಮತ್ತು ಇತರ ಕಥೆಗಳು. (ಎಲ್. ಎಸ್. ನಾಯಕ.)
೧೩. ಸತ್ತವನ ಸೇಡು ಮತ್ತು ಇತರ ಕಥೆಗಳು. (ಡಾ| ವಿ. ಆರ್. ಭಟ್.)
೧೪. "ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು.
೧೫. ಬಾಬಿಗೆ ಬಾಸಿಂಗ (ಏಕಾಂಕ ಪ್ರಹಸನ).
೧೬. ವೇಣೂರಿನ ಗತವೈಭವ. (ಲೇ: ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು.)
೧೭. ಒಗಟುಗಳು. [ಲೇ: ಶ್ರೀ ಟಿ. ಚಂದ್ರರಾಜ ಸೆಟ್ಟಿ.]
೧೮. ಜಗಳಗಂಟಿ ಮತ್ತು ಇತರ ಕಥೆಗಳು. [ಲೇ: ವೈದ್ಯಗುರು ಎಮ್. ಆರ್. ಭಟ್.]
೧೯. ರಥೋತ್ಸವ.
೨೦. ಕರಿನಾಯಿ ಮತ್ತು ಮುಖವ್ಪು (ಲೇ: ದಿ| ಎಮ್. ಎನ್. ಕಾಮತ್)
೨೧. ಭಾರತದ ಮಹಾನಗರಗಳು (ಪ್ರಥಮ ಭಾಗ)
೨೨. ತಿರುಕ್ಕುರಲ್ (ಶ್ರೀ| ಡಿ. ಪುಟ್ಟಸ್ವಾಮಿ.)
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು. (ಲೇ: ಶ್ರೀ| ಬಿ. ಶಂಕರ ಭಟ್.)
೨೪. ಭಾರತದ ಮಹಾನಗರಗಳು (ದ್ವಿತೀಯ ಭಾಗ)
೨೫. ಧೈರ್ಯ ಮತ್ತು ಇತರ ಸತ್ಯಕಥಾನಕಗಳು. (ಶ್ರೀ ಎಲ್. ಎಸ್. ನಾಯಕ.)
೨೬. ಮಾರಾವತಾರ (ಏಕಪಾತ್ರಯಕ್ಷಗಾನ ಪ್ರಬಂಧ) (ಲೇ: ಶ್ರೀ| ಜಿ. ಆರ್. ಪಾಂಡೇಶ್ವರ)
೨೭. ಹಾಸವಿಲಾಸ (ಆರಿಸಿ ತೆಗೆದ ನಗೆಹನಿಗಳು)
೨೮. ಸತ್ಯವಂತ ಬಾಬಿ (ಏಕಾಂಕ ಪ್ರಹಸನ)
೨೯. ಜಾಣ್ಮೆಯ ಒಗಟುಗಳು (ಸಂಗ್ರಾಹಕರು: ಡಾ| ಎಸ್. ಪಿ. ಭಟ್, ಮಂಗಳೂರು)
೩೦. ಜಾತಕ ಕಥೆಗಳು (ಸಂಗ್ರಾಹಕರು: ಎಮ್. ಸುಬ್ರಾಯನ್, ವಿದ್ವಾನ್.)
೩೧ ಕಾರ್ಕಳದ ಚರಿತ್ರೆ (ಲೇ: ಶ್ರೀ| ಡಿ. ಪುಟ್ಟಸ್ವಾಮಿ, ಬಿ. ಎ., ಬಿ. ಎಲ್., ಎಡ್ವೊಕೇಟ್)
೩೨. ಮರ್ಜಿ (ಏಕಾಂಕ ಪ್ರಹಸನ) ರಚಯಿತರು: ದಿ| ಎಮ್. ಎನ್. ಕಾಮತ್.
೩೩. ದರ್ಶನದ ಕಥೆಗಳು (ಲೇ: ಬಿ. ಶಂಕರ ಭಟ್ಟ ಮತ್ತು ಬಿ. ಎಮ್. ಶರ್ಮಾ)

* ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

ಈ ವರೆಗೆ ಮೂವತ್ತಮೂರು ಪುಸ್ತಕಗಳಲ್ಲಿ, ಮೂವತ್ತಮೂರು ಅಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ 746 ಪುಟಗಳನ್ನು ಕೊಟ್ಟಿರುತ್ತದೆ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ, ಮಂಗಳೂರು-1.

# ದರ್ಶನದ ಕಥೆಗಳು

## ಜಿನದತ್ತ ಸೆಟ್ಟಿ

### (ಆಸ್ತೇಯ ವ್ರತ ಕಥೆ)

ಅವಂತಿನಾಡು ಸಂಪತ್ತಿನಿಂದ ತುಂಬಿ ತುಳುಕುತ್ತಿದ್ದ ನಾಡು. ಅಲ್ಲಿ ಜಿನದತ್ತ ಸೆಟ್ಟಿ ದೊಡ್ಡ ವ್ಯಾಪಾರಿ. ಅವನ ಮಡದಿ ಜಿನೇಂದ್ರ ದಾಸಿ. ಅವರ ಹಿರಿಯ ಮಗ ಜಿನದಾಸ.

ಒಮ್ಮೆ ಜಿನಪಾಲಿತರೆಂಬ ಮುನಿ ಜಿನದತ್ತ ಸೆಟ್ಟಿಯ ಮನೆಗೆ ಬಂದರು. ಸೆಟ್ಟಿ ಮನೆಗೆ ಬಂದ ಮುನಿಯನ್ನು ಭಕ್ತಿಯಿಂದ ಬರಮಾಡಿಕೊಂಡು, ಪ್ರೀತಿಯಿಂದ ಸತ್ಕರಿಸಿದನು. ಜಿನೇಂದ್ರ ದಾಸಿಯೂ ಮುನಿ ಪರಿಚರ್ಯೆ ಯಲ್ಲಿ ಭಾಗವಹಿಸಿದಳು. ಹಲವು ದಿನಗಳ ವರೆಗೆ ಜಿನಪಾಲಿತ ಮುನಿ ಸೆಟ್ಟಿಯ ಮನೆಯಲ್ಲಿ ಕಳೆದರು; ಆ ಮೇಲೆ ಬಂದು ಜಿನ ಸೆಟ್ಟಿಯ ಒಪ್ಪಿಗೆ ಪಡೆದು ಬೇರೊಂದು ಊರಿಗೆ ಹೊರಟರು. ಜಿನದತ್ತನೂ ಮುನಿಯನ್ನು ಹಿಂಬಾಲಿಸಿದನು. ಅದೇ ಸಮಯವನ್ನು ಹಾರೈಸಿ ಕುಳಿತಿದ್ದ ಸೆಟ್ಟಿಯ ಹಿರಿಯ ಮಗ ಜಿನದಾಸ ಸೆಟ್ಟಿಯು ಉಗ್ರಾಣದ ಬಾಗಿಲು ತೆಗೆದು ಒಳ ಹೊಕ್ಕು ಬಂಗಾರದ ಕೆಲವು ಗಟ್ಟಿಗಳಿಗೆ ಕೈಕೊಟ್ಟನು. ಸೆಟ್ಟಿ ಮುನಿ ಗಳನ್ನು ಬೀಳ್ಕೊಟ್ಟು ಮನೆಗೆ ಹಿಂದಿರುಗಿದಾಗ ಉಗ್ರಾಣದ ಬಾಗಿಲು ತೆರೆ ದಿತ್ತು. ಒಳಹೊಕ್ಕು ನೋಡಿದಾಗ ಬಂಗಾರದ ಕೆಲವು ಗಟ್ಟಿಗಳು ಮಾಯ ವಾಗಿದ್ದುವು! "ಅರೇ! ಬಂಗಾರವೇನಾಯಿತು! ಮುನಿ ಕೈಕೊಟ್ಟನೋ?" ಎಂಬ ಸಂಶಯಪಿಶಾಚಿ ಜಿನದತ್ತನನ್ನು ಪೀಡಿಸಿತು.

ಜಿನದತ್ತ ಕೂಡಲೇ ಜಿನಪಾಲಿತ ಮುನಿಯ ಬೆನ್ನು ಹಿಡಿದ. ಮುನಿ ಯನ್ನು ಕಂಡು, "ಇನ್ನೊಮ್ಮೆ ದಯಮಾಡಿ ನಮ್ಮ ಮನೆಗೆ ಬರಬೇಕು" ಎಂದು ಬೇಡಿಕೊಂಡು ಅಂತೆಯೇ ಮುನಿಗಳನ್ನು ಮನೆಗೆ ಕರಕೊಂಡು ಬಂದ; ಉಪಚರಿಸಿದ. "ಬಂಗಾರದ ಗಟ್ಟಿ ಕಾಣೆಯಾಗಿದೆ— ಎಂದು ಹೇಳುವು ದಾದರೂ ಹೇಗೆ?" ಎಂದು ಯೋಚಿಸಿ, ಕಡೆಗೆ ಒಂದು ಕತೆ ಹೇಳಿದ. ಅದಕ್ಕೆ

ಉತ್ತರವಾಗಿ ಮುನಿ ಒಂದು ಎದುರು ಹೇಳಿದರು. ಹೀಗೆ ಕತೆ ಎದುರು ಕತೆಗಳನ್ನು ಸೆಟ್ಟಿಯು ಮಗ ಅಡಗಿ ಕೂತು ಕೇಳಿದ. ಕಡೇಗೆ ತಾನು ಬಂಗಾರಕ್ಕೆ ಕೈಕೊಟ್ಟುದು ತಪ್ಪಾಯಿತೆಂದು ತಿಳಿದು, ಮುನಿಗಳ ಮುಂದೆ ಬಂದು ತನ್ನ ತಪ್ಪನ್ನು ಒಪ್ಪಿಕೊಂಡ.

### ಜಿನದತ್ತ ಹೇಳಿದ ಕತೆ ೧

ಹುಲಿಯೂರು ಎಂಬುದೊಂದು ಊರು. ಅಲ್ಲಿ ಕರಾಳನೆಂಬ ಒಬ್ಬ ಮನುಷ್ಯನಿದ್ದನು. ಅವನು ದುಷ್ಟರ ಸಂಗದಿಂದ ಕೆಟ್ಟು ಕೇಡಿಗನಾಗಿದ್ದ. ಕೇಡಿಗ ಕರಾಳ ಒಮ್ಮೆ ಒಂದು ಅರಮನೆಗೆ ಕನ್ನವಿಕ್ಕಿ, ಉಗ್ರಾಣವನ್ನು ಹೊಕ್ಕು, ಹೊನ್ನರಾಶಿಯನ್ನು ಕೈತುಂಬಾ ಬಾಚಿಕೊಂಡು ಹೊರಬಿದ್ದ. ಹಾಗೆ ಹೊರಬಿದ್ದ ಕಳ್ಳ ಕರಾಳನನ್ನು ಊರ ತಳಾರನು ಬೆನ್ನು ಹಿಡಿದನು. ಕಳ್ಳನ ಮೇಲೆ ಕಲ್ಲುಗುಂಡುಗಳ ಮಳೆ ಸುರಿಸಿದನು. ಕರಾಳನು ತಳಾರನಿಗೆ ಹೆದರಿ, ಓಡಿ ಹೋಗಿ ಒಬ್ಬ ಸೆಟ್ಟಿಯ ಮರೆಹೊಕ್ಕನು. ಸೆಟ್ಟಿ "ಕಳ್ಳನು ಒಳ್ಳಿದನಲ್ಲ; ನಾಯಿ ಮೌನಿಯಲ್ಲ" ಎಂಬ ಮಾತನ್ನು ಯೋಚಿಸದೆ, ಕರಾಳನಿಗೆ ಆಶ್ರಯವಿತ್ತನು. ತಳಾರನು ಸೆಟ್ಟಿಯ ಮನೆ ವರೆಗೆ ಬಂದು ಕಳ್ಳನ ತುಬ್ಬಾಗದೆ, ಬಂದ ಹಾಗೆ ಹಿಂದೆ ಹೋದನು. "ಬೀಸಿದ ಕೈ ತಪ್ಪಿದರೆ ಸಹಸ್ರಕಾಲ" ಎಂಬುದನ್ನು ಮನಸ್ಸಿಗೆ ತಾರದೆ, "ಹುಲಿಯನ್ನು ಬಿಟ್ಟರೆ ಕ್ರೂರರಿಲ್ಲ" ಎಂಬ ಮಾತನ್ನು ನಿಜ ಮಾಡಲೆಂಬಂತೆ, ಮನೆಯಲ್ಲಿ ಒಬ್ಬನೇ ಇದ್ದ ಸೆಟ್ಟಿಯನ್ನು ಕೊರಳು ಕಿಸುಕಿ ಕೊಂದ; ಅಲ್ಲಿದ್ದ ಬೆಳ್ಳಿ ಬಂಗಾರಗಳನ್ನು ದೋಚಿಕೊಂಡು ತನ್ನ ದಾರಿ ಹಿಡಿದ. ಹೀಗೆ ಕೆಲವರು, ಮಾಡಿದ ಉಪಕಾರಕ್ಕೆ ಅಪಕಾರವನ್ನೆಸಗುವರು.

### ಸೆಟ್ಟಿ ಹೇಳಿದ ಕತೆಗೆ ಜಿನಪಾಲಿತ ಮುನಿ ಹೇಳಿದ ಎದುರು ಕತೆ ೨

ದ್ವಾರಾವತೀ ನಗರವನ್ನು ಅರ್ಧಚಕ್ರಿ ನಾರಾಯಣನು ಆಳುತ್ತಿದ್ದನು. ಆಗ ಒಮ್ಮೆ ದಂಡಕರೆಂಬ ಋಷಿ ಅರಮನೆಗೆ ಬಂದರು. ಚಕ್ರಿ ಋಷಿಗಳನ್ನು ಅರಮನೆಯಲ್ಲಿ ಇರಿಸಿಕೊಂಡು ಉಪಚರಿಸಿದ. ಋಷಿಗೆ ಯಾವುದೋ ಒಂದು ರೋಗ ಪೀಡಿಸುತ್ತಿತ್ತು. ಮದ್ದು ತೆಗೆದುಕೊಳ್ಳಬೇಕೆಂದರೆ ಋಷಿ ಕೇಳರು.

ಚಕ್ರಿ ಇದಕ್ಕೇನು ಮಾಡುವುದೆಂದು ಯೋಚಿಸಿ, ರಾಜವೈದ್ಯನನ್ನು ಕರೆಸಿ, ಅವನೊಡನೆ ವಿಚಾರಿಸಿದನು. ಅದಕ್ಕೆ ರಾಜವೈದ್ಯನು ತಾನೊಂದು

ಮೂಲಿಕೆಯನ್ನು ಕೊಡುತ್ತೇನೆಂದೂ, ಅದನ್ನು ನವಣೆಯ ಹಿಟ್ಟಿನೊಡನೆ ಸೇರಿಸಿ, ಉಂಡೆ ಮಾಡಿ ಋಷಿಗಳಿಗೆ ತಿನ್ನಿಸಬೇಕೆಂದೂ ಹೇಳಿದನು. ಚಕ್ರಿ ಅಂತೆಯೇ ಮಾಡಲು, ಕೆಲವೇ ದಿನಗಳಲ್ಲಿ ಋಷಿಗಳ ರೋಗ ಗುಣ ವಾಯಿತು. ಇದನ್ನು ಕಂಡ ರಾಜವೈದ್ಯನಿಗೆ ಒಂದು ಬಗೆಯ ಹೆಮ್ಮೆ. ಒಂದು ದಿನ ಋಷಿಗಳೂ, ಚಕ್ರಿಯೂ ಮಾತನಾಡುತ್ತ ಕುಳಿತಿದ್ದರು. ಅಲ್ಲಿಗೆ ರಾಜವೈದ್ಯನೂ ಬಂದನು. ಏನೋ ರೋಗ; ರೋಗ ಚಿಕಿತ್ಸೆಯ ಮಾತು ಬಂತು. ಆಗ ಆ ರಾಜವೈದ್ಯ "ಅಸಾಧ್ಯವಾದ ರೋಗದಿಂದ ಪೀಡಿತರಾಗಿದ್ದ ಋಷಿಗಳಿಗೆ ರೋಗ ಮುಕ್ತರಾಗಿರುವುದು ಬಹಳ ಸಂತೋಷ!" ಎಂದು ಋಷಿಗಳಿಗೆ ಕೈಮುಗಿದನು. "ಕರ್ಮವೇ ಕಾರಣವಾಗಿ ದುಃಖಪ್ರಾಪ್ತಿ ಯಾಗುವುದು. ಕರ್ಮ ನಾಶವಾದಾಗ ದುಃಖ ನಾಶವಾಗುವುದು."ಎಂದು ಋಷಿ ಹೇಳಿ ಸುಮ್ಮನಾದರು. "ನನ್ನ ಮದ್ದಿನಿಂದ ರೋಗ ಗುಣವಾಯಿತು. ಈಗ ಕರ್ಮವಂತೆ! ಇದಕ್ಕೇನೆನ್ನಬೇಕು?" ಎಂದು ವೈದ್ಯನ ಮನಸ್ಸಿನಲ್ಲಿ ಹಗೆಯು ಹೊಗೆಯಾಡಿತು. ಹಾಗೆಯೇ ಹಗೆಯು ನಂಜೇರಿ ವೈದ್ಯ ಪ್ರಾಣ ಬಿಟ್ಟ; ಮುಂದೆ ಕೋಡಗನಾಗಿ ಹುಟ್ಟಿದ.

ಕೆಲವು ಕಾಲ ಕಳೆದ ಮೇಲೆ ಋಷಿ ದ್ವಾರಾವತಿಯನ್ನು ಬಿಟ್ಟು ದೇಶ ಸಂಚಾರಕ್ಕೆ ಹೊರಟರು. ಹೀಗೆ ಸಂಚರಿಸುತ್ತ ಒಮ್ಮೆ ಮಾರ್ಗದ ಬಳಿ ಒಂದು ಮರದ ಬುಡದಲ್ಲಿ ಕುಳಿತರು. ಮೊದಲ ಹುಟ್ಟಿನಲ್ಲಿ ವೈದ್ಯನಾಗಿದ್ದ ಆ ಕೋಡಗ ಅದೇ ಮರದ ಮೇಲೆ ಕುಳಿತಿತ್ತು. ಅದು ಮರದ ಕೆಳಗೆ ಕುಳಿತಿದ್ದ ಋಷಿಯನ್ನು ಕಂಡು ಮೊದಲಿನ ಹಗೆಯನ್ನು ನೆನೆದು, ಒಂದು ಮಾವಿನ ಗೆಲ್ಲನ್ನು ಮುರಿದು ಸಮಾಧಿಸ್ಥರಾದ ಋಷಿಗಳ ಕಡೆಗೆ ಎಸೆಯಿತು. ಗೆಲ್ಲಿನ ಚೂಪಾದ ಕಡೆ ಋಷಿಗಳ ತೊಡೆಯನ್ನು ಹೊಕ್ಕಿತು. ಸಮಾಧಿಸ್ಥ ರಾದ ಋಷಿ ಈ ನೋವಿಗೆ ಅಳುಕದೆ ಕುಳಿತಿದ್ದರು. ಕಂಡ ಕೋಡಗನಿಗೆ ಋಷಿಯ ಮಹತ್ವದ ಅರಿವಾಯಿತು. ಅದು ಕೂಡಲೇ ಕೆಳಗೆ ಇಳಿದು ಬಂದು, ತನ್ನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡಿತು. ಆ ಕಪಿ ವ್ರತಗಳನ್ನಾಚರಿಸಿ, ದೇಹ ಬಿಟ್ಟು ದೇವಗತಿಯನ್ನೈದಿತು. ಹೀಗೆ ಮೂರ್ಖ ರಾದವರು ಸಜ್ಜನರನ್ನು ಬರಿದೆ ಕಾಡುವರು.

### ಸೆಟ್ಟಿ ಹೇಳಿದ ಕತೆ ೩

ಭಾನುಪುರವೆಂಬ ಪಟ್ಟಣದಲ್ಲಿ ಕಪಿಲನೆಂಬ ಬ್ರಾಹ್ಮಣನಿದ್ದನು.

ಹಲವು ವಿದ್ಯೆಗಳಲ್ಲಿ ಪಾರಂಗತನಾಗಿದ್ದ ಕಪಿಲನಿಗೆ ತಾನು ಗಾರುಡ ವಿದ್ಯೆಯಲ್ಲಿಯೂ ಪಾರಂಗತನಾಗಬೇಕೆಂಬ ಆಸೆ ಹುಟ್ಟಿತು. ಹಾಗೆಯೇ ಅವನು ಮನೆಬಿಟ್ಟು, ಮೂಡು ಕಡೆಗೆ ಪಯಣ ಬೆಳೆಸಿದನು. ಅಲ್ಲೊಂದು ಹಳ್ಳಿಯಲ್ಲಿ ಒಬ್ಬ ಮಂತ್ರವಾದಿ ಇದ್ದನು. ಕಪಿಲನು ಆ ಮಂತ್ರವಾದಿಯ ಬಳಿ ಸೇರಿ, ತನಗೆ ಗಾರುಡವಿದ್ಯೆಯನ್ನು ಕಲಿಸಬೇಕೆಂದು ಕೇಳಿಕೊಂಡನು. ಹಲವು ದಿನಗಳ ವರೆಗೆ ಅಲ್ಲಿದ್ದು, ಗಾರುಡ ವಿದ್ಯೆಯನ್ನು ಕಲಿತು ಊರಿಗೆ ಹಿಂದಿರುಗಿದನು.

ಕಪಿಲನು ಊರಿಗೆ ಮರಳಿ ಬರುತಿದ್ದಾಗ ದಾರಿಯಲ್ಲೊಂದು ಹುಲಿ ಸತ್ತು ಬಿದ್ದಿತ್ತು. ಅದು ಹಾವಿನ ವಿಷವೇರಿ ಸತ್ತುದಾಗಿತ್ತು. ಕಪಿಲನು ಅದನ್ನು ಪರೀಕ್ಷಿಸಿ, ತನ್ನ ವಿದ್ಯೆಯ ಬಲದಿಂದ ಹುಲಿಯನ್ನು ಬದುಕಿಸಿದನು. ಹುಲಿ ವಿಷವಿಳಿದು, ಚೇತರಿಸಿಕೊಂಡು, ಬಿದ್ದಲ್ಲಿಂದ ಎದ್ದು ನಿಂತಿತು; ಎದುರಿಗಿದ್ದ ಬ್ರಾಹ್ಮಣನನ್ನು ಕಣ್ಣು ಕೆರಳಿಸಿ ನೋಡಿತು. ಇವನು ತನ್ನ ಜೀವವನ್ನು ಬದುಕಿಸಿದವನೆಂಬ ಯೋಚನೆಯನ್ನು ಕೂಡ ಮಾಡದೆ, ಒಂದೇ ಬಾರಿಗೆ ಬ್ರಾಹ್ಮಣನ ಮೇಲೆ ಹಾರಿ, ಅವನನ್ನು ಕೊಂದೇ ಬಿಟ್ಟಿತು. ಹೀಗಿದೆ ವ್ಯಾಘ್ರನೀತಿ.

### ಮುನಿ ಹೇಳಿದ ಕತೆ ೪

ಕೇಸರಿಪುರವೆಂಬ ಪಟ್ಟಣದಲ್ಲಿ ಅಮಲನೆಂಬ ಸೆಟ್ಟಿ ಇದ್ದನು. ಅವನ ಮನೆತುಂಬಾ ಬದುಕು. ಅವನಿಗೆ ಒಂದೇ ಒಂದು ಗಂಡುಮಗು. ಮಗುವಿಗೆ ನಾಲ್ಕು ವರ್ಷ ಪ್ರಾಯ. ಮಗುವಿಗೆ ಮೈತುಂಬಾ ಆಭರಣ; ಕಿವಿಗೆ ಕುಂಡಲ; ಕೈಗೆ ಬಳೆ; ಕಾಲಿಗೆ ಕಡಗ; ಸೊಂಟಕ್ಕೆ ಗೆಜ್ಜೆಸರ ಹೀಗಿತ್ತು ಆಭರಣ. ಮಗುವನ್ನು ನೋಡಲಿಕ್ಕೆ ಒಬ್ಬ ಬಡ ಹೆಂಗಸು. ಸೆಟ್ಟಿ ಹೆಂಗಸಿಗೆ ಸರಿಯಾಗಿ ಸಂಬಳ ಕೊಡುತ್ತಿರಲಿಲ್ಲ; ಅವಳಿಗೆ ಹೊಟ್ಟೆಗೆ ಬಟ್ಟೆಗೆ ಕೂಡ ಸರಿಯಾಗಿ ಕೊಡುತ್ತಿರಲಿಲ್ಲ. ಅದೇ ಕಾರಣವಾಗಿ ಅವಳಿಗೆ ಮಗುವಿನ ಆಭರಣಗಳ ಮೇಲೆ ಆಸೆ ಹುಟ್ಟಿತು; ಅವು ತನಗೆ ಸಿಕ್ಕಿದರಾಗದೇ ಎಂದು ಅವಳು ಯೋಚಿಸಿದಳು.

ಕೆಟ್ಟ ಯೋಚನೆ ಮನಸ್ಸಿಗೆ ಬಂದ ಮೇಲೆ, ಅದೂ ಬಡತನದ ಬೇಗೆಯಲ್ಲಿ ಏನಾದೀತು ಏನಾಗದು ಎಂದು ಹೇಳಲಿಕ್ಕೆ ಬರುವುದಿಲ್ಲ. ಹೆಂಗಸು ಒಂದು ದಿನ ಮನೆಯಲ್ಲಿ ಯಾರೂ ಇಲ್ಲದಾಗ ಮಗುವನ್ನು ತನ್ನ ಮನೆಗೆ

ತರಕೊಂಡು ಹೋಗಿ, ಮಗುವನ್ನು ಕೊರಳು ಹಿಸುಕಿ ಕೊಂದು, ಮಗುವಿನ ಮೈಮೇಲಿದ್ದ ಆಭರಣಗಳನ್ನೆಲ್ಲಾ ತೆಗೆದಿಟ್ಟಳು. ಮಗುವಿನ ಹೆಣವನ್ನೇನು ಮಾಡುವುದು? ಅದೇ ಬೀದಿಯಲ್ಲಿ ಒಂದು ಸಾಧು ಬಸವ ತಿರುಗುತ್ತಿತ್ತು. ಹೆಂಗಸು ಮಗುವಿನ ಹೆಣವನ್ನು ಬಸವನ ಚೂಪಾದ ಕೋಡುಗಳಿಗೆ ಯಾರೂ ಕಾಣದಂತೆ ಸಿಕ್ಕಿಸಿ ಬಿಟ್ಟಳು. ಬಸವ ಮಗುವನ್ನು ಇರಿದು ಕೊಂದಿತೆಂದು ಜನರು ಯೋಚಿಸಲಿ ಎಂದು ಅವಳ ಯೋಚನೆ.

ಸಂಜೆ ಸೆಟ್ಟಿ ಮನೆಗೆ ಬಂದು ಮಗುವನ್ನು ಕರೆದಾಗ ಮಗು ಮನೆಯಲ್ಲಿರಲಿಲ್ಲ; ಮಗುವೆಲ್ಲಿ ಎಂದು ಮನೆಯಲ್ಲೆಲ್ಲಾ ಗಲಾಟೆ. ಇಷ್ಟಾಗುವಾಗ ಬಸವ ಕೋಡುಗಳಿಗೆ ಮಗುವಿನ ಹೆಣವನ್ನು ಸಿಕ್ಕಿಸಿಕೊಂಡು ಅಲ್ಲೇ ಬೀದಿಯಲ್ಲಿ ಬಂದಿತು. ಬಸವನ ಹಿಂದೆ ಕೆಲವು ಮಂದಿ ಜನರು ಕೂಡಿದರು. ಬಸವ ಮಗುವನ್ನು ಕೊಂದಿತೆಂದು, ನಿರಪರಾಧಿಯಾದ ಆ ಬಸವನನ್ನು ಕಲ್ಲು ಕೊರಡುಗಳಿಂದ ಹೊಡೆಯತೊಡಗಿದರು.

ಬಸವ ಪೆಟ್ಟು ಸಹಿಸಲಾರದೆ ಒಂದು ಕಮ್ಮಾರಸಾಲೆಗೆ ನುಗ್ಗಿತು. ಅಲ್ಲಿ ಕುಲುಮೆಯಲ್ಲಿದ್ದ ಕಾದ ಕಬ್ಬಿಣದ ತುಂಡೊಂದನ್ನು ಬಾಯಲ್ಲಿ ಕಚ್ಚಿಕೊಂಡು, ತಾನೀ ಪಾಪವನ್ನು ಮಾಡಿದವನಲ್ಲವೆಂದು ಪ್ರಮಾಣ ಮಾಡಿ ತೋರಿಸಲೋ ಎಂಬಂತೆ ಹೊರಬಂದಿತು. ಅಲ್ಲಿದ್ದ ಜನರು ಇದನ್ನು ನೋಡಿ ಬೆಕ್ಕಸ ಬೆರಗಾದರು. "ಮಗುವನ್ನು ಕೊಂದದ್ದು ಬಸವನಲ್ಲ; ಬಸವನ ಬಾಯಿ ಸುಟ್ಟು ಹೋಗುತ್ತಿತ್ತು. ಮಗುವನ್ನು ಕೊಂದವರು ಬೇರೆ ಯಾರೋ ಇರಬೇಕು" ಎಂದು ಅಲ್ಲಿ ನೆರೆದವರು ಕೂಗಿ ಹೇಳಿದರು.

ಇಷ್ಟಾಗುವುದರೊಳಗೆ ಊರ ತಳಾರರು ಕೊಲೆಗಡುಕರ ಪತ್ತೆ ಹಚ್ಚಲು ಬೀದಿ ಬೀದಿಯಲ್ಲಿ ಸುತ್ತಾಡಿದರು; ಸುಳಿದಾಡಿದರು. ಮಗುವನ್ನು ನೋಡಿಕೊಳ್ಳುತ್ತಿದ್ದ ಹೆಂಗಸಿನ ಮನೆ ನುಗ್ಗಿದರು; ಅಲ್ಲಿ ಸತ್ತ ಮಗುವಿನ ಆಭರಣ ಸಿಕ್ಕಿತು. ಕೊಲೆಗಾರ್ತಿ ಹೆಂಗುಸನ್ನು ಹೆಡೆಮುರಿ ಕಟ್ಟಿ ತಂದು ಊರ ಜನರಿಗೆ ಒಪ್ಪಿಸಿದರು; ಹೆಂಗುಸಿಗೆ ತಕ್ಕ ಶಿಕ್ಷೆಯಾಯಿತು. ಬಸವನಿಗೆ ಹೊಡೆದ ಊರ ಜನರು "ತಾವು ಅನ್ಯಾಯವಾಗಿ ವಿಚಾರವಿಲ್ಲದೆ ಬಸವನಿಗೆ ಹೊಡೆದೆವೆಲ್ಲಾ" ಎಂದು ಪಶ್ಚಾತ್ತಾಪಪಟ್ಟರು. ಆದುದರಿಂದ ವಿಚಾರ ಮಾಡದೆ ಯಾವ ಕೆಲಸವನ್ನೂ ಮಾಡಬಾರದು.

### ಸೆಟ್ಟಿ ಹೇಳಿದ ಕತೆ ೫

ಭಾರತೀ ನದೀತೀರದಲ್ಲಿ ಒಬ್ಬ ಕಾಪಾಲಿಕನಿದ್ದನು. ಅವನು ಅಲ್ಲೊಂದು ಗುಡಿಸಲಲ್ಲಿ ವಾಸಿಸುತ್ತಿದ್ದನು. ಒಮ್ಮೆ ಬೇಸಗೆಯ ಕಡೆಯಲ್ಲಿ ಒಂದು ದಿನ ಬಲವಾದ ಮೋಡ ಕವಿದು, ಗುಡುಗಿ ಮಿಂಚಿ, ಮಳೆ ಸುರಿಯಿತು. ನದಿ ಉಕ್ಕಿ ಹರಿಯಿತು. ಹೊಲ ನೆಲಗಳೆಲ್ಲಾ ನೀರಿನಿಂದ ತುಂಬಿ ಹೋದುವು. ಕಾಪಾಲಿಕನು ಒಂದು ಎತ್ತರದ ದಿಣ್ಣೆಯಲ್ಲಿ ನಿಂತುಕೊಂಡು, ತುಂಬಿ ಹರಿಯುತ್ತಿದ್ದ ಹೊಳೆಯನ್ನೇ ನೋಡುತ್ತಿದ್ದನು. ಆಗ ನೀರಿನ ಪ್ರವಾಹದಲ್ಲಿ ಒಂದು ಆನೆಮರಿ ಮುಳುಗುತ್ತಾ ಏಳುತ್ತಾ ತೇಲಿ ಹೋಗುವುದು ಕಂಡುಬಂತು. ಕಾಪಾಲಿಕನು ಕನಿಕರದಿಂದ ಹರಿವ ಹಳ್ಳಕ್ಕೆ ಹಾರಿ ನೆರೆಯಲ್ಲಿ ಕೊಚ್ಚಿ ಹೋಗುತ್ತಿದ್ದ ಆನೆಮರಿಯನ್ನು ಹಿಡಿದು ದಡಕ್ಕೆ ತಂದನು.

ಕಾಪಾಲಿಕನೂ ಅವನ ಶಿಷ್ಯನೂ ಆನೆಮರಿಯನ್ನು ಬಹಳ ಪ್ರೀತಿಯಿಂದ ಸಾಕಿದರು. ಆನೆಮರಿ ದಿನದಿಂದ ದಿನಕ್ಕೆ ಸೊಗಸಾಗಿ ಬೆಳೆಯಿತು. ಅದರ ಬುದ್ಧಿವಂತಿಕೆಗೆ, ಗುಣಕ್ಕೆ, ನಡತೆಗೆ ಊರಿಗೆ ಊರೇ ಬೆರಗಾಯಿತು. ಈ ಸುದ್ದಿ ಊರ ಅರಸನ ಕಿವಿಗೆ ಬಿತ್ತು. "ಕಾಪಾಲಿಕನಿಗೇಕೆ ಆನೆ? ಅದನ್ನು ಹಿಡಿದು ತನ್ನಿರಿ" ಎಂದು ಅರಸು ಸೇವಕರಿಗೆ ಅಪ್ಪಣೆಯಿತ್ತನು. ಅರಸಾಳುಗಳು ಕಾಪಾಲಿಕನ ಗುಡಿಸಲಿಗೆ ಬಂದು ಆನೆಯನ್ನು ಒಯ್ದರು. ಕಾಪಾಲಿಕನಿಗೆ ಆನೆಯನ್ನು ಬಿಡುವ ಮನಸ್ಸಿರಲಿಲ್ಲ, ಆದರೆ ಅರಸಾಳುಗಳನ್ನು ತಡೆಯುವ ಧೈರ್ಯವಾದರೂ ಅವನಿಗೆ ಎಲ್ಲಿಂದ ಬರಬೇಕು?

ಆನೆಯನ್ನೇನೋ ಅರಮನೆಗೆ ತಂದರು. ಆನೆಗೆ ಮಾತ್ರ ಅರಮನೆ ಸೊಗಯಿಸಲಿಲ್ಲ. ಅದಕ್ಕೆ ಕಾಪಾಲಿಕನ ಗುಡಿಸಲಿನದೇ ಯೋಚನೆ. ಒಂದು ದಿನ ಕಟ್ಟಿದ ಕಟ್ಟನ್ನು ಕಡಿದು ಕಾಪಾಲಿಕನ ಗುಡಿಸಲ ಕಡೆಗೆ ಓಡಿತು. ಅರಸನು ಆಳು ಕಳುಹಿಸಿ ಆನೆಯನ್ನು ಹಿಡಿದು ತರಿಸಿ ಬಲವಾದ ಸಂಕಲೆಗಳಿಂದ ಮತ್ತೊಮ್ಮೆ ಕಟ್ಟಿಸಿದನು. ಆನೆ ಮತ್ತೊಮ್ಮೆ ಕಟ್ಟು ಕಡಿದು ಓಡಿ ಹೋಯಿತು. ಹೀಗೆ ಹಲವು ಬಾರಿ ನಡೆಯಿತು. ಕಡೆಗೊಮ್ಮೆ ಸಾಧುವೇ ಆನೆಯನ್ನು ಹಿಡಿದು ಅರಸನಿಗೊಪ್ಪಿಸಿದನು. ಆನೆಗೆ ಕಾಪಾಲಿಯ ಮೇಲೆ ಸಿಟ್ಟೇರಿತು. ನೀರಲ್ಲಿ ತೇಲುಮುಳ್ಕಾಗುತ್ತಿದ್ದ ತನ್ನನ್ನು ಕಾಪಾಡಿದ ಕಾಪಾಲಿಯ ಉಪಕಾರವನ್ನು ನೆನಸದೇ ಕೊಂದೇ ಬಿಟ್ಟಿತು. ಹೀಗೆ ಮಾಡಿದ ಉಪ

ಕಾರವನ್ನು ಮರೆಯುವ, ಉಪಕಾರಕ್ಕೆ ಅಪಕಾರ ಮಾಡುವ ಅಧಮರು ಲೋಕದಲ್ಲಿ ಹಲವರಿರುವರು.

ಮುನಿ ಹೇಳಿದ ಕತೆ ೬

ದಂತಿಪುರದಲ್ಲಿ ಅನಂತಶ್ರೀ ಎಂಬ ಸುಂದರಿಯೊಬ್ಬಳಿದ್ದಳು. ಅವಳಿಗೆ ಒಂದು ಕೆಟ್ಟ ಅಭ್ಯಾಸ; ಕಳ್ಳು ಕುಡಿಯುವುದು. ಅನಂತಶ್ರೀಯ ಗೆಳತಿ ವಾಸವದತ್ತೆ. ವಾಸವದತ್ತೆ ಒಂದು ಚೆಲುವಾದ ಗಿಳಿಯನ್ನು ಅನಂತಶ್ರೀಗೆ ಕಾಣಿಕೆ ಕೊಟ್ಟಿದ್ದಳು. ಅನಂತಶ್ರೀ ಗಿಳಿಯನ್ನು ಪ್ರೀತಿಯಿಂದ ಸಾಕಿದಳು; ಗಿಳಿಗೆ ಹಲವು ಮಾತುಗಳನ್ನು ಕಲಿಸಿದಳು.

ಅನಂತಶ್ರೀಗೆ ತನ್ನಷ್ಟು ಸುಂದರಿಯರು, ಐಶ್ವರ್ಯವಂತರು ಯಾರೂ ಇಲ್ಲವೆಂಬ ಹೆಮ್ಮೆ. ಅವಳಿಗೆ ಊರಿನ ಇತರ ಹೆಂಗುಸರನ್ನು ಕಂಡರಾಗದು; ಉಳಿದ ಹೆಂಗುಸರಿಗೂ ಹಾಗೆ—ಅನಂತಶ್ರೀಯೊಡನೆ ಅಷ್ಟಷ್ಟೆ. ಅನಂತಶ್ರೀಗೆ ಆಗದ ಕೆಲವು ಮಂದಿ ಹೆಂಗುಸರು ಅವಳ ಗೆಳತಿಯಾದ ವಾಸವದತ್ತೆಯ ಗೆಳೆತನ ಮಾಡಿದರು; ಮತ್ತು ಅವಳಿಗೆ ದುಡ್ಡಿನ ಆಸೆ ತೋರಿಸಿ, ಮದ್ಯಕ್ಕೆ ವಿಷ ಬೆರಸಿ ಅನಂತಶ್ರೀಗೆ ಕೊಟ್ಟರು. ವಾಸವದತ್ತೆ ತಾನು ಏನೂ ಅರಿಯದವಳಂತೆ ವಿಷ ಬೆರಸಿದ ಮದ್ಯವನ್ನು ಅನಂತಶ್ರೀಗೆ ತಂದುಕೊಟ್ಟು ಹಿಂದಿರುಗಿದಳು.

ಅನಂತಶ್ರೀ ಮದ್ಯವನ್ನು ಆಗಲೇ ಕುಡಿಯದೆ, ಒಂದು ಬಟ್ಟಲಲ್ಲಿ ಸುರಿಸಿಟ್ಟು ಮಂಚದ ಮೇಲೆ ಮಲಗಿ ನಿದ್ದೆಹೋದಳು. ಆಗ ಆ ಮದ್ಯದ ಬಟ್ಟಲಿಗೆ ನೊಣಗಳು ಮುತ್ತಿದುವು; ಮುತ್ತಿದಂತೆ ಸತ್ತು ಬಿದ್ದುವು. ಇದನ್ನು ಅಲ್ಲೇ ಇದ್ದ ಗಿಳಿ ಕಂಡಿತು. "ಮದ್ಯದಲ್ಲೇನೋ ದೋಷವಿದೆ. ಇದನ್ನು ಕುಡಿದರೆ ಯಜಮಾನಿಗೆ ಅಪಾಯ ಬರಬಹುದು" ಎಂದು ಯೋಚಿಸಿತು. ಹಾಗೆಯೇ ಬಟ್ಟಲಿನ ಮೇಲೆ ಹಾರಿ ಬಟ್ಟಲನ್ನು ಮಗುಚಿ ಹಾಕಿತು. ಅದು ಗಾಜಿನ ಬಟ್ಟಲು. ನೆಲಕ್ಕೆ ಬಿದ್ದು ಚೂರುಚೂರಾಯಿತು; ಮದ್ಯವೆಲ್ಲಾ ನೆಲದ ಮೇಲೆ ಚೆಲ್ಲಿ ಹೋಯಿತು.

ಬಟ್ಟಲು ಬಿದ್ದು ಒಡೆದ ಶಬ್ದಕ್ಕೆ ಅನಂತಶ್ರೀಗೆ ಎಚ್ಚರವಾಯಿತು. ಗಿಳಿ ಬಟ್ಟಲು ಒಡೆದು ಹಾಕಿತೆಂದು ಗಿಳಿಯ ಮೇಲೆ ಸಿಟ್ಟೇರಿದಳು, ಒಂದೇ ಹೊಡೆತಕ್ಕೆ ಗಿಳಿಯನ್ನು ಕೊಂದೇ ಬಿಟ್ಟಳು. ಗಿಳಿ ಕೆಳಗೆ ಬಿದ್ದು ಪ್ರಾಣ ಬಿಟ್ಟಿತು. ಅನಂತಶ್ರೀಗೆ ಸಿಟ್ಟಿಳಿಯಿತು. ತಾನು ಮಾಡಿದ ತಪ್ಪಿನ ಅರಿವು

ಅವಳಿಗಾಯಿತು. ಆದರೆ ಕೆಲಸ ಕೈಮೀರಿ ಹೋಗಿತ್ತು. ಮಾಡುವು ದೇನು? ಮಧ್ಯಪಾಯಿಯಾದ ಅನಂತಶ್ರೀಯಂತೆ ವರ್ತಿಸಿದರೆ ಯಾರಾ ದರೂ ಅನರ್ಥಕ್ಕೆ ಕಾರಣರಾಗಬೇಕು.

### ಸೆಟ್ಟಿ ಹೇಳಿದ ಕತೆ ೭

ಅವನೀಭೂಷಣವೆಂಬ ಪಟ್ಟಣದಲ್ಲಿ ಒಬ್ಬ ಬಡಗಿಯಿದ್ದ. ಬಹು ಬುದ್ಧಿವಂತ. ಒಮ್ಮೆ ಮರ ಕಡಿಯಲೆಂದು ಬಡಗಿ ಕಾಡಿಗೆ ನಡೆದ. ಯಾವ ಮರವನ್ನು ಕಡಿಯುವುದೆಂದು ಹಾಗೆ ಆಚೆ ಈಚೆ ನೋಡುತ್ತಿದ್ದಾಗ ಒಂದು ಆನೆ ಬಡಗಿಯನ್ನು ಓಡಿಸಿಕೊಂಡು ಬಂತು. ಬಡಗಿ ಕೂಡಲೇ ಹತ್ತಿರ ವಿದ್ದ ಒಂದು ಹೆಮ್ಮರವನ್ನೇರಿದನು. ಆನೆ ಮರದ ಬುಡಕ್ಕೆ ಬಂತು. ಆಚೆ ಈಚೆ ನೋಡಿತು. ಮರವನ್ನು ಮುರಿದು ಹಾಕಲು ಪ್ರಯತ್ನಿಸಿತು; ಅದು ಸಾಧ್ಯವಾಗಲಿಲ್ಲ. ಆನೆ ಬೇರೆ ಉಪಾಯ ಕಾಣದೆ ಅಲ್ಲಿಂದ ಹೊರಟು ಹೋಯಿತು.

ಆನೆ ಹೊರಟು ಹೋದ ಮೇಲೆ ಬಡಗಿ ಮರದಿಂದ ಕೆಳಗಿಳಿದ. ಆನೆ ಅಟ್ಟಿಕೊಂಡು ಬಂದಾಗ ಈ ಮರವೇ ತನ್ನನ್ನು ಕಾಪಾಡಿತೆಂಬುದನ್ನು ಮನ ಸ್ಸಿಗೆ ತಾರದೆ ಆ ಹೆಮ್ಮರವನ್ನೇ ಕಡಿದು ಹಾಕಿದ. ಹೀಗೆ ಲೋಕದಲ್ಲಿ ವಿಚಾರಶೂನ್ಯರಾದ ಉಪಕಾರಹೀನರು ಹಲವರಿರುವರು.

### ಮುನಿ ಹೇಳಿದ ಕತೆ ೮

ಅಮರಖೇಡ ಎಂಬ ಊರು. ಅಲ್ಲಿ ಯಜ್ಞದತ್ತೆಯೆಂಬ ಬ್ರಾಹ್ಮಣಿ ಯೊಡನೆ ಚಂದ್ರದತ್ತನೆಂಬ ಬ್ರಾಹ್ಮಣನು ವಾಸಿಸುತ್ತಿದ್ದನು. ಅವರಿಗೊಂದು ಗಂಡು ಮಗು. ಆ ಬ್ರಾಹ್ಮಣ ಒಂದು ಮುಂಗಸಿಯನ್ನು ಸಾಕಿದ್ದ. ಮುಂಗಸಿಯೆಂದರೆ ಆ ಗಂಡಹೆಂಡಿರಿಗೆ ತುಂಬಾ ಪ್ರೀತಿ.

ಒಂದು ದಿನ ಯಜ್ಞದತ್ತೆ ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ ಎಲ್ಲಿಯೋ ನೆರೆಮನೆಗೆ ತಿರುಗಾಟಕ್ಕೆ ಹೋದಳು. ಮನೆಯೊಳಗೆ ತೊಟ್ಟಿ ಲಲ್ಲಿ ಮಗು; ಜಗಲಿಯಲ್ಲಿ ಮುಂಗಸಿ ಮಾತ್ರವಲ್ಲದೆ ಬೇರೆ ಯಾರೂ ಇರಲಿಲ್ಲ. ಆ ವೇಳೆಯಲ್ಲಿ ಒಂದು ನಾಗರಹಾವು ಕಂಡಿಯ ಮೂಲಕ ಮಗು ಮಲಗಿದ್ದ ಕೋಣೆಗೆ ನುಗ್ಗಿತು. ಹೊರಜಗಲಿಯಲ್ಲಿ ಮಗುವಿನ ತೊಟ್ಟಿಲು ಕಟ್ಟಿದ್ದ ಕೋಣೆಯ ಹೊರಬಾಗಿಲಲ್ಲಿ ಕುಳಿತಿದ್ದ ಮುಂಗಸಿಗೆ ಹಾವು ಕಂಡಿತು. ಹಾವನ್ನು ಕಂಡ ಮುಂಗಸಿ ಸುಮ್ಮಗಿರುತ್ತದೆಯೇ?

ಅದು ಒಂದೇ ನೆಗೆತಕ್ಕೆ ಹಾವಿನ ಕಡೆಗೆ ಹಾರಿ ಹಾವನ್ನು ತುಂಡುತುಂಡು ಮಾಡಿಬಿಟ್ಟಿತು. ಹಾವಿನ ನೆತ್ತರು ಮುಂಗಸಿಯ ಮುಸುಡಿಗೆ ಅಂಟಿ ಕೊಂಡಿತು. ನೆತ್ತರು ಮುಸುಡಿನ ಮುಂಗಸಿ ಜಗಲಿಯಲ್ಲಿ ಬ್ರಾಹ್ಮಣಿಯ ಬರವನ್ನೇ ಹಾರೈಸಿ ಕುಳಿತಿತ್ತು.

ಬ್ರಾಹ್ಮಣಿ ನೆರೆಮನೆಯಿಂದ ಮರಳಿದಳು. ಮುಂಗಸಿ ಬ್ರಾಹ್ಮಣಿಯ ಬಳಿಗೋಡಿ, ಬ್ರಾಹ್ಮಣಿಯ ಪಾದಮೂಲದಲ್ಲಿ ಸಂತಸದಿಂದ ಹೊರಳಾಡಿತು. ಮುಂಗಸಿಯ ಮುಸುಡಲ್ಲಿ ನೆತ್ತರನ್ನು ಕಂಡು ಬ್ರಾಹ್ಮಣಿ ನಡುಗಿದಳು. ಕೋಪದಿಂದ ಕೆಂಪಾದಳು. ಬಳಿಯಲ್ಲಿದ್ದ ಕಲ್ಲುಗುಂಡನ್ನು ಎತ್ತಿ ಮುಂಗ ಸಿಯ ತಲೆಗೆ ಗುರಿಯಿಟ್ಟಳು. ಮುಂಗಸಿ ಒಂದೇ ಏಟಿಗೆ ತಲೆಯೊಡೆದು ಪ್ರಾಣ ಬಿಟ್ಟಿತು.

"ಅಯ್ಯೋ! ನನ್ನ ಮಗುವಿಗೇನಾಯಿತೋ" ಎಂದು ಅಳುತ್ತಾ ತೊಟ್ಟಿಲ ಬಳಿಗೋಡಿದಳು. ಮಗು ತೊಟ್ಟಿಲಲ್ಲಿ ಹಾಯಾಗಿ ನಿದ್ದೆ ಮಾಡು ತ್ತಿತ್ತು. ತೊಟ್ಟಿಲ ಬಳಿ ನೆಲದಲ್ಲಿ ಹಾವು ತುಂಡುತುಂಡಾಗಿ ಸತ್ತು ಬಿದ್ದಿತ್ತು.

ಅದನ್ನು ಕಂಡು ಹೆಂಗುಸಿಗೆ ತಾನು ಮಾಡಿದ ತಪ್ಪಿನ ಅರಿವಾಯಿತು. ಅವಿಚಾರದಿಂದ ಮಾಡಿದ ಅಕಾರ್ಯಕ್ಕಾಗಿ ಅವಳು ಹಳಹಳಿಸಿದಳು. ಆದುದರಿಂದ ವಿಚಾರಿಸಿ ಕಾರ್ಯ ಮಾಡಬೇಕು.

## ಸೆಟ್ಟಿ ಹೇಳಿದ ಕತೆ ೬

ಕಾಮ್ಯಕವೆಂಬ ಕಾಡಿನಲ್ಲಿ ಒಂದು ಹಳೆ ಬಾವಿ. ಒಮ್ಮೆ ಆ ಬಾವಿ ಯಲ್ಲಿ ಒಂದು ನಾಗರಹಾವು; ಒಂದು ಹುಲಿ; ಒಂದು ಕಪಿ; ಒಬ್ಬ ಅಕ್ಕ ಸಾಲೆ ಹೀಗೆ ನಾಲ್ಕು ಜೀವಿಗಳು ದಾರಿತಪ್ಪಿ ಬಿದ್ದು ಬಿಟ್ಟವು. ಆ ನಾಲ್ಕು ಜೀವಿಗಳೂ ಹೇಗಾದರೂ ಮೇಲೆ ಬರಬೇಕೆಂದು ಚಡಪಡಿಸುತ್ತಿದ್ದುವು.

ಆ ವೇಳೆಗೆ ಸರಿಯಾಗಿ ಕಾಶಿಯಾತ್ರೆಗೆ ಹೋಗುತ್ತಿದ್ದ ಕೌಶಿಕನೆಂಬ ಬ್ರಾಹ್ಮಣನು ಆ ಕಾಡಿನ ದಾರಿಯಾಗಿ ಆ ಬಾವಿಯ ಬಳಿಗೆ ಬಂದನು. ಅವನು ಬಾಯಾರಿ ಕಂಗಾಲಾಗಿದ್ದನು. ಅವನು ತನ್ನ ಬಳಿಯಿದ್ದ ಚೆಂಬಿಗೆ ಹಗ್ಗ ಕಟ್ಟಿ ಬಾವಿಗೆ ಇಳಿಸಿ ನೀರು ತುಂಬಿತೆಂದು ತಿಳಿದು ಚೆಂಬನ್ನು ಮೇಲ ಕ್ಕೆತ್ತಿದನು. ಮೇಲಕ್ಕೆಳೆಯುತ್ತಾನೆ! ಚೆಂಬನ್ನು ಹಿಡಿದುಕೊಂಡು ಹಗ್ಗ ದಲ್ಲಿ ನೇತಾಡಿಕೊಂಡು ಒಂದು ಹುಲಿ ಮೇಲೆ ಬಂತು! ಬ್ರಾಹ್ಮಣ ಹೆದರಿ ಹೆಪ್ಪೆಯಾದ. ಆದರೆ ಹುಲಿ ಮಾತ್ರ ಬ್ರಾಹ್ಮಣನಿಗೆ ಯಾವ ಬಗೆಯ ಪೀಡೆ

ಯನ್ನೂ ಕೊಡಲಿಲ್ಲ. ಬದಲಾಗಿ "ಬ್ರಾಹ್ಮಣಾ! ಬಾವಿಯಲ್ಲಿ ಬಿದ್ದು ಸಾಯುತ್ತಿದ್ದ ನನ್ನನ್ನು ನೀನು ಬದುಕಿಸಿದೆ. ಅದಕ್ಕಾಗಿ ನಿನ್ನ ಉಪಕಾರವನ್ನು ನಾನು ಎಂದಿಗೂ ಮರೆಯೆನು" ಎಂದು ಬ್ರಾಹ್ಮಣನಿಗೆ ಅಡ್ಡಬಿದ್ದು ಹೊರಟು ಹೋಯಿತು.

ಬ್ರಾಹ್ಮಣನು ಮತ್ತೊಮ್ಮೆ ಹಗ್ಗವನ್ನು ಬಾವಿಗಿಳಿಸಿದನು; ಈ ಸಲ ಹಗ್ಗವನ್ನೆಳೆದಾಗ ಒಂದು ಹಾವು ಬರಬೇಕೇ? ಹಾವನ್ನು ಕಂಡು ಬ್ರಾಹ್ಮಣ ಹೆದರಿದ. ಹಾವು ಬ್ರಾಹ್ಮಣನಿಗೇನೂ ಕೇಡು ಮಾಡಲಿಲ್ಲ; ಬದಲಾಗಿ, "ನೀನು ನನ್ನ ಪ್ರಾಣ ಉಳಿಸಿದೆ. ನಿನ್ನ ಉಪಕಾರವನ್ನು ನಾನೆಂದಿಗೂ ಮರೆಯಲಾರೆ. ನಿನಗೇನಾದರೂ ಆಪತ್ತು ಬಂದಾಗ ನನ್ನನ್ನು ನೆನಸು" ಎಂದು ಹೇಳಿ ಹೊರಟುಹೋಯಿತು.

ಬ್ರಾಹ್ಮಣ ಮೂರನೆಯ ಬಾರಿ ಹಗ್ಗ ಇಳಿಸಿ ಮೇಲಕ್ಕೆ ಎಳೆದಾಗ ಒಂದು ಕಪಿ ಬಳ್ಳಿ ಹಿಡಿದು, ಮೇಲೆ ಬಂತು. ಆ ಕಪಿಯೂ ಬ್ರಾಹ್ಮಣನಿಗೆ ಕೈಮುಗಿದು, "ನೀನು ಯಾತ್ರೆ ಮುಗಿಸಿ ಹಿಂದಿರುಗಿ ಬರುವಾಗ ನಾನು ವಾಸಮಾಡುವ ವನಕ್ಕೆ ಬಂದು ಹೋಗಬೇಕು" ಎಂದು ಹೇಳಿ ಹೊರಟು ಹೋಯಿತು.

ನಾಲ್ಕನೆಯ ಬಾರಿ ಬ್ರಾಹ್ಮಣ ಹಗ್ಗವಿಳಿಸಿ, ನೀರು ಎಳೆದ. ಆಗ ಒಬ್ಬ ಅಕ್ಕಸಾಲೆ ಮೇಲೆ ಬಂದ. "ನೀನಿಲ್ಲದಿದ್ದರೆ ನಾನು ಈ ಬಾವಿಯಲ್ಲೇ ಸಾಯಬೇಕಿತ್ತು. ನಿನ್ನಿಂದಾಗಿ ನಾನು ಬದುಕಿದೆ. ನಿನ್ನ ಉಪಕಾರ ಹಿರಿದು. ನೀನು ಯಾತ್ರೆಯಿಂದ ಹಿಂದಿರುಗುವಾಗ ನನ್ನ ಗುಡಿಸಲಿಗೆ ದಯಮಾಡಿಸಬೇಕು" ಎಂದು ಹೇಳಿ ಹೊರಟು ಹೋದನು.

ಕೌಶಿಕನು ಯಾತ್ರೆ ಮುಗಿಸಿ ಕಾಮ್ಯಕ ವನದ ದಾರಿಯಾಗಿ ಹಿಂದಿರುಗಿದನು; ತಾನು ಬಾವಿಯಿಂದ ಮೇಲಕ್ಕೆತ್ತಿದ್ದ ಕಪಿ ವಾಸಿಸುತ್ತಿದ್ದ ವನಕ್ಕೆ ನಡೆದನು. ಕಪಿ ಬ್ರಾಹ್ಮಣನನ್ನು ಆದರದಿಂದ ಬರಮಾಡಿಕೊಂಡು, ರುಚಿರುಚಿಯಾದ ಹಣ್ಣುಹಂಪಲುಗಳನ್ನು ಬ್ರಾಹ್ಮಣನ ಮುಂದಿಟ್ಟು ಉಪಚರಿಸಿತು.

ಬ್ರಾಹ್ಮಣನು ಕಪಿ ನಿವಾಸದಿಂದ ಹೊರಟು ಹುಲಿಯ ಗುಹೆಗೆ ಬಂದನು. ಹುಲಿ ಕೂಡ ಬ್ರಾಹ್ಮಣನಿಗೆ ಮರ್ಯಾದೆ ಮಾಡಿ, ಹಲವು ಬಗೆಯ ಆಭರಣಗಳನ್ನು ಬ್ರಾಹ್ಮಣನಿಗೆ ಕಾಣಿಕೆಯಿತ್ತು ಆದರಿಸಿತು.

ಹುಲಿ ಕೊಟ್ಟ ಚಿನ್ನಾಭರಣಗಳನ್ನು ಹಿಡಿದುಕೊಂಡು ಬ್ರಾಹ್ಮಣ ಅಕ್ಕಸಾಲೆಯ ಗುಡಿಸಲಿಗೆ ನಡೆದನು. ಅಕ್ಕಸಾಲೆ ಬ್ರಾಹ್ಮಣನನ್ನು ಅನೇಕ ತರದಲ್ಲಿ ಉಪಚರಿಸಿದನು. ಬ್ರಾಹ್ಮಣನು ಅಕ್ಕಸಾಲೆಯ ಕೈಯಲ್ಲಿ ತನ್ನ ಬಳಿಯಿದ್ದ ಚಿನ್ನಾಭರಣಗಳನ್ನು ಕೊಟ್ಟು "ಇವನ್ನೆಲ್ಲಾ ಕರಗಿಸಿ ಒಂದೇ ಗಟ್ಟಿ ಮಾಡಿ ಕೊಡು." ಎಂದು ಹೇಳಿದನು. ಅಕ್ಕಸಾಲೆಗೆ ಬಂಗಾರ ಕಂಡು ಬಾಯಲ್ಲಿ ನೀರೂರಿತು. ಈ ಬಡ ಬ್ರಾಹ್ಮಣನಿಗೇಕೆ? ನಾನಿದನ್ನು ನಾಡೊಡೆಯನಿಗೊಪ್ಪಿಸಿದರೆ, ನನಗೆ ತುಂಬಾ ಬಹುಮಾನ ದೊರಕುವುದೆಂದು ಯೋಚಿಸಿದನು. ಹಾಗೆಯೇ ಆಭರಣಗಳನ್ನು ಊರ ಒಡೆಯನಿಗೊಪ್ಪಿಸಿ, ಯಾರೋ ಬಡಬ್ರಾಹ್ಮಣ ಕಳವು ಮಾಡಿ ತಂದ ಒಡವೆಯಿದೆಂದು ಚಾಡಿ ಹೇಳಿದನು. ಅರಸು ವಿಚಾರ ಮಾಡದೆ, ಕೂಡಲೇ ಆ ಬ್ರಾಹ್ಮಣನನ್ನು ಸೆರೆಯಲ್ಲಿರಿಸಲು ದೂತರಿಗೆ ಅಪ್ಪಣೆಯಿತ್ತನು.

ಕೌಶಿಕ ಬ್ರಾಹ್ಮಣನಿಗೆ ಅರಸು ತನ್ನನ್ನೇಕೆ ಸೆರೆಯಲ್ಲಿರಿಸಿದನೆಂಬ ವಿಚಾರವೇ ಹೊಳೆಯಲಿಲ್ಲ. ಅವನಿಗೆ ಸೆರೆಮನೆಯಲ್ಲಿದ್ದಾಗ, ತಾನು ಬಾವಿಯಿಂದೆತ್ತಿದ ಸರ್ಪದ ನೆನಪಾಯಿತು. ಅವನು ಸರ್ಪವನ್ನು ನೆನೆದನು. ಕೂಡಲೇ ಸರ್ಪವು ಬ್ರಾಹ್ಮಣನ ಎದುರು ಪ್ರತ್ಯಕ್ಷವಾಯಿತು. ನೆನಸಿದ ಕಾರಣವೇನೆಂದು ಕೇಳಿತು. ಬ್ರಾಹ್ಮಣನು ನಡೆದ ಸಂಗತಿಯನ್ನೆಲ್ಲಾ ಸರ್ಪಕ್ಕೆ ತಿಳಿಸಿದನು. ಸರ್ಪವು ಬ್ರಾಹ್ಮಣನ ಹತ್ತಿರ ಏನೋ ಗುಟ್ಟು ತಿಳಿಸಿ ಹೊರಟುಹೋಯಿತು.

ಸೆರೆಮನೆಯಿಂದ ಹೊರಟು ಹೋದ ಸರ್ಪ ಅಂಗಳದಲ್ಲಿ ಆಡುತ್ತಿದ್ದ ಅರಸುಮಗನಿಗೆ ಕಚ್ಚಿತು. ಅರಸುಮಗನು ವಿಷವೇರಿ ಬಿದ್ದುಬಿಟ್ಟನು. ಅರಮನೆಯಲ್ಲಿ ಬೊಬ್ಬೆಯೋ ಬೊಬ್ಬೆ. ಈ ಬೊಬ್ಬೆ ಸೆರೆಮನೆಯಲ್ಲಿದ್ದ ಬ್ರಾಹ್ಮಣನಿಗೂ ಕೇಳಿಸಿತು.

ಬ್ರಾಹ್ಮಣನು ಸೆರೆಮನೆಯ ಕಾವಲುಗಾರರೊಡನೆ ತನಗೆ ವಿಷ ಚಿಕಿತ್ಸೆ ಗೊತ್ತಿದೆಯೆಂದು ಹೇಳಿದನು. ಅವರು ಅದನ್ನು ಅರಸನಿಗೆ ತಿಳಿಸಿದರು. ಅರಸುಕೂಡಲೇ ಬ್ರಾಹ್ಮಣನನ್ನು ಕರೆಸಿದನು. ಬ್ರಾಹ್ಮಣನು ಸರ್ಪ ವಿಷಕ್ಕೆ ಚಿಕಿತ್ಸೆ ಮಾಡಿ ಅರಸು ಮಗನನ್ನು ಬದುಕಿಸಿದನು. ಅರಸನಿಗೆ ಸಂತೋಷವಾಯಿತೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ! ಬ್ರಾಹ್ಮಣನಿಗೆ ಅಕ್ಕಸಾಲೆ ಮಾಡಿದ ಮೋಸ ತಿಳಿದು ಅರಸು ಅಕ್ಕಸಾಲೆಯನ್ನು ಶಿಕ್ಷಿಸಿದನು. ಬ್ರಾಹ್ಮಣನನ್ನು ಸನ್ಮಾನಿಸಿ ಬೀಳ್ಕೊಟ್ಟನು.

## ಮುನಿ ಹೇಳಿ ಕಥೆ ೧೦

ಉಜ್ಜಯನೀ ಪಟ್ಟಣವನ್ನು ಮಹೇಂದ್ರರಾಜನು ಆಳುತ್ತಿದ್ದನು. ಆ ರಾಜನ ರಾಜಶ್ರೇಷ್ಠಿ ಕುಬೇರನೆಂಬಾತನು ಒಮ್ಮೆ ದ್ವೀಪಾಂತರಕ್ಕೆ ವ್ಯಾಪಾರಕ್ಕಾಗಿ ಹೋಗಿ ಹಿಂದೆ ಬರುವಾಗ ಒಂದು ಮಾವಿನ ಹಣ್ಣನ್ನು ತಂದು, ರಾಜನಿಗೆ ಕಾಣಿಕೆ ಇತ್ತನು. ಆ ಹಣ್ಣನ್ನು ತಿಂದರೆ ಸಕಲ ರೋಗಗಳೂ ನಾಶವಾಗುವುವು. ಸಕಲ ರುಜಾಪಹಾರವೆಂದು ಆ ಹಣ್ಣಿನ ಹೆಸರು. ತಾನೊಬ್ಬನೇ ಆ ಹಣ್ಣನ್ನೇಕೆ ತಿನ್ನಬೇಕು? ಇದು ಅರಸನಿಗೆ ಯೋಗ್ಯವೆಂದು ಯೋಚಿಸಿ ಅರಸನಿಗಿತ್ತನು. ಅರಸನೂ ಹಾಗೆಯೇ "ಹಣ್ಣಿನ ಉಪಯೋಗವನ್ನು ಸಕಲರೂ ಪಡೆಯಲಿ" ಎಂದು ಚಿಂತಿಸಿ, ಅರಮನೆಯ ನಂದನದಲ್ಲಿ ಆ ಹಣ್ಣನ್ನು ನೆಡಿಸಿದನು.

ಮಾವಿನ ಗಿಡ ಮರವಾಗಿ ಹೂಬಿಟ್ಟು ಕಾಯಾಗಿ ಹಣ್ಣಾಯಿತು. ಮರ ಹಣ್ಣುಗಳಿಂದ ತುಳುಕುತ್ತಿದ್ದಾಗ ಒಂದು ಗರುಡಪಕ್ಷಿ ಒಂದು ವಿಷಸರ್ಪವನ್ನೆತ್ತಿಕೊಂಡು ಬಂದು ಮಾವಿನಮರದ ಮೇಲೆ ಕುಳಿತಿತು. ಸರ್ಪದ ವಿಷ ಒಂದು ಹಣ್ಣಿಗೆ ತಗಲಿತು. ಅದೇ ಹಣ್ಣು ಕಳಿತು ಮೊದಲಬಾರಿಗೆ ಕೆಳಗುರುಳಿತು. ತೋಟದ ಯಜಮಾನನು ಹಣ್ಣನ್ನು ತಂದು ಅರಸಿಗೆ ಕೊಟ್ಟನು. ಅರಸಿ ಆ ಹಣ್ಣನ್ನು ತಿಂದ ಕೂಡಲೆ ಕಾಯ ಬಿಟ್ಟು ಕೈಲಾಸಕ್ಕೆ ಸಂದಳು.

ಇದನ್ನು ಕಂಡು ಅರಸನಿಗೆ ದುಃಖ ಕೋಪಗಳೆರಡೂ ಏಕಕಾಲಕ್ಕೇರಿದುವು. "ಆ ಮರವನ್ನು ಕೂಡಲೇ ಕಡಿದು ಹಾಕಿ ಬಿಡಿ" ಎಂದು ಆಳುಗಳಿಗೆ ಅಪ್ಪಣೆಯಿತ್ತನು. ಕುಬೇರಸೆಟ್ಟಿಗೂ 'ಬೇಕಾದಷ್ಟು ಬೈಗಳು ಸಿಕ್ಕಿತು. ಅರಸಾಳುಗಳು ಮಾತ್ರ ಆ ಮರವನ್ನು ಕಡಿದು ಹಾಕಲು ಹೊತ್ತುಗಳೆದರು. ಅಷ್ಟರಲ್ಲಿ ಒಬ್ಬ ಕುಷ್ಠರೋಗಿ ತಾನು ಈ ವಿಷದ ಹಣ್ಣನ್ನು ತಿಂದು ಸಾಯುವೆನೆಂದು ಅಲ್ಲಿಗೆ ಬಂದನು. ಹಣ್ಣನ್ನೊಂದನ್ನು ಹೆಕ್ಕಿ ಕಚ್ಚಿಕಚ್ಚಿ ತಿಂದನು. ಹೇಳುವುದೇನು? ನೋಡುವುದೇನು? ಒಂದೇ ಒಂದು ಕ್ಷಣದಲ್ಲಿ ಅವನ ರೋಗಗಳೆಲ್ಲಾ ಮಾಯವಾಗಿ ಅವನ ಮೈ ಬಂಗಾರದ ಬಣ್ಣಕ್ಕೆ ತಿರುಗಿತು. ಆಗ ಆ ಊರಿನಲ್ಲಿದ್ದ ರೋಗಿಗಳೂ, ಕುಂಟರೂ, ಕುರುಡರೂ ಅಲ್ಲಿ ಬಂದು ಹಣ್ಣು ತಿಂದು ಸುಖಿಗಳಾದರು. ಅದುದರಿಂದ ಯಾರೂ ಅವಿವೇಕಿಗಳಾಗಿ ವರ್ತಿಸಬಾರದು.

## ಸೆಟ್ಟಿ ಹೇಳಿದ ಕತೆ ೧೧

ನಂದಗಿರಿಯೆಂಬ ಪಟ್ಟಣದಲ್ಲಿ ಸಾನಂದನೆಂಬ ಬೇಡನು ವಾಸಿಸು ತ್ತಿದ್ದನು. ಒಮ್ಮೆ ಆ ಬೇಡನು ದೈತ್ಯವನವೆಂಬ ಒಂದು ಅರಣ್ಯಕ್ಕೆ ಹೋದನು.

ದೈತ್ಯವನದಲ್ಲಿ ಸುತ್ತಾಡಿ ಸುಳಿದಾಡಿ ಬೇಡನು ಬಳಲಿ ಬೆಂಡಾದನು. ಬಾಯಾರಿ ಗಂಟಲಾರಿತು. ನೀರು ಹುಡುಕುತ್ತ ಎಲ್ಲಿಯೂ ನೀರು ಸಿಗದೆ ನಿರಾಶನಾಗಿ ಒಂದೆಡೆ ಕುಳಿತನು. ಇದನ್ನು ಒಂದು ಕಪಿ ಕಂಡಿತು. ಅದು ಸಾನಂದನ ಮೇಲೆ ದಯೆಗೊಂಡು ನೀರಿರುವ ಸ್ಥಳವನ್ನು ತೋರಿಸಿತು. ಬೇಡನು ನೀರು ಕುಡಿದು ದಣಿವಾರಿಸಿದನು.

"ಈಗ ನಾನು ಬಹುದೂರ ನಡೆಯಬೇಕು. ದಾರಿಯಲ್ಲಿ ಬಾಯಾರಿ ದರೆ ಮಾಡುವುದೇನು? ಅದಕ್ಕಾಗಿ ಈ ಕಪಿಯನ್ನು ಕೊಂದು ಇದರ ಚರ್ಮದಿಂದ ಚೀಲ ಮಾಡಿ ಅದರಲ್ಲಿ ನೀರು ತುಂಬಿಸಿಕೊಂಡು ಹೋಗ ಬೇಕು" ಎಂದು ಯೋಚಿಸಿದನು; ಮತ್ತು ಬಳಿಯಲ್ಲಿದ್ದ ಬಿಲ್ಲನ್ನೆತ್ತಿ ಬಾಣ ಹೂಡಿ ಕಪಿಯನ್ನು ಕೊಂದು, ಚರ್ಮ ಸುಲಿದೇ ಬಿಟ್ಟನು. ಹೀಗೆ ಹಲ ವರು ಉಪಕಾರಶೂನ್ಯರಿದ್ದಾರೆ.

## ಮುನಿ ಹೇಳಿದ ಕತೆ ೧೨

ಕೌಶಾಂಬಿ ಎಂಬ ನಗರದಲ್ಲಿ ವಿಶಾಖಾನಂದನನೆಂಬ ವ್ಯಾಪಾರಿ ಯಿದ್ದನು. ಆತನ ಮಗ ಅಂಗಾರಕ. ಅಂಗಾರಕಕುಮಾರ ಒಮ್ಮೆ ಹಲವು ರತ್ನಗಳನ್ನು ಒಂದು ತಟ್ಟೆಯಲ್ಲಿಟ್ಟು ಹೊರಜಗಲಿಯ ಮೇಲೆ ಕುಳಿತು ಅವು ಗಳನ್ನು ಪರೀಕ್ಷಿಸುತ್ತಿದ್ದನು.

ಅದೇ ಕಾಲದಲ್ಲಿ ಮೇಧಾವಿ ಎಂಬ ಮುನಿಗಳು ಆ ವ್ಯಾಪಾರಿಯ ಮನೆಗೆ ಚರಿಗೆಗೆ ಬಂದರು. ಮುನಿಗಳನ್ನು ಕಂಡು ಅಂಗಾರಕನು ಕುಳಿ ತಲ್ಲಿಂದ ಎದ್ದು ಮುನಿಗಳನ್ನೆದುರುಗೊಳ್ಳಲು ಮುಂದುವರಿದನು. ಅದೇ ಸಮಯದಲ್ಲಿ ಅಂಗಳದಲ್ಲಾಡುತ್ತಿದ್ದ ನವಿಲೊಂದು ಜಗಲಿಯನ್ನೇರಿ ತಟ್ಟೆ ಯಲ್ಲಿದ್ದ ರತ್ನವೊಂದನ್ನು ಕಚ್ಚಿಕೊಂಡು ನುಂಗಿಬಿಟ್ಟಿತು.

ಮುನಿಗಳು ಅಂಗಾರಕನ ಆತಿಥ್ಯ ಪಡೆದು ಹಿಂದಿರುಗಿದರು. ಅಂಗಾ ರಕನಿಗೆ ರತ್ನಗಳ ನೆನಪಾಯಿತು. ಬಂದು ನೋಡುತ್ತಾನೆ, ತಟ್ಟೆಯಲ್ಲಿ ಒಂದು ರತ್ನವಿಲ್ಲ. "ಅರೇ! ರತ್ನವೇನಾಯಿತು?" ಎಂದು ಯೋಚಿಸುತ್ತ ಮುನಿಗಳ

ಬೆನ್ನು ಹತ್ತಿದನು. ಮುನಿಗಳ ಬಳಿಗೈದಿ ಮುನಿಗಳನ್ನು ಬೇಡಿಕೊಂಡು ಮತ್ತೊಮ್ಮೆ ಮನೆಗೆ ಕರಕೊಂಡು ಬಂದನು. ಮುನಿಗಳನ್ನು ಆಸನದಲ್ಲಿ ಕುಳ್ಳಿರಿಸಿ, "ಮುನಿಗಳೇ! ನಿಮಗೇಕೆ ಆ ರತ್ನ? ದಯಮಾಡಿ ಹಿಂದೆ ಕೊಡ ಬಾರದೇ?" ಎಂದು ಕೇಳಿಕೊಂಡನು.

ಅಂಗಾರಕನ ಮಾತು ಕೇಳಿ ಮುನಿಗಳಿಗೆ ಆಶ್ಚರ್ಯ. "ಈಗೇನು ಮಾಡಲಿ? ರತ್ನವಿಲ್ಲವೆಂದರೆ ಇವನು ನಂಬಲಾರ. ಈಗ ನನಗೆ ಅರ್ಹತ್ಪ ದವೇ ಶರಣು" ಎಂದು ಧ್ಯಾನಮಗ್ನರಾದರು.

ಮುನಿ ಮೌನಿಯಾದುದನ್ನು ಕಂಡು ಅಂಗಾರಕ ಸಿಟ್ಟಿನಿಂದ ಕಿಡಿಕಿಡಿ ಯಾದನು. ಬಳಿಯಲ್ಲಿದ್ದ ಕಟ್ಟಿಗೆಯ ತುಂಡೊಂದನ್ನು ತೆಗೆದು ಸೊಪ್ಪು ಸೊವಡಾಗುವಂತೆ ಮುನಿಗೆ ಬಡಿದನು. ಮುನಿ ಹಂದಾಡಲಿಲ್ಲ. ಹಾಗೆ ಹೊಡೆ ಯುತ್ತಿದ್ದಾಗ ಹೊಡೆಯಲು ಉಪಯೋಗಿಸಿದ ಕಟ್ಟಿಗೆಯ ಚೂರೊಂದು ಸಿಡಿದು ಹಾರಿ ಅಂಗಳದಲ್ಲಿದ್ದ ನವಿಲಿನ ಕೊರಳನ್ನು ತುಂಡರಿಸಿತು. ನವಿ ಲಿನ ಕುತ್ತಿಗೆ ತುಂಡಾಗಿ ಅದು ನುಂಗಿದ್ದ ರತ್ನ ಹೊರಬಿತ್ತು. ಅದನ್ನು ಕಂಡ ಅಂಗಾರಕ ಶೆಟ್ಟಿ, ನೀರು ಮುಟ್ಟಿದ ಅಂಗಾರಕದಂತಾದನು. ತನ್ನ ತಪ್ಪಿನ ಅರಿವಾಗಿ ಮುನಿಗಳ ಕ್ಷಮೆ ಬೇಡಿ ತಾನೂ ಜಿನದೀಕ್ಷೆ ಹೊಂದಿದನು.

ಹೀಗೆ ಕಳ್ಳರು ಕಳ್ಳರಲ್ಲದವರನ್ನು ಕಾಡುವರು.

--------

# ಸತ್ಯವ್ರತ

ವೆಂಗಿ ಮಂಡಲ ಹೂತೋಟಗಳಿಂದಲೂ, ಕೈಹೊಲಗಳಿಂದಲೂ, ತಿಳಿ ಕೊಳಗಳಿಂದಲೂ ಮನೋಹರವಾಗಿ ತೋರುವುದು. ಆ ವೆಂಗಿ ಮಂಡ ಲದ ಪ್ರಧಾನಪುರ ಪ್ರತಿಪಾಲಪುರ. ಧನದನೆಂಬ ಅರಸು ಪ್ರತಿಪಾಲಪುರದ ಒಡೆಯ; ಜಿನಧರ್ಮಪಾರಾಯಣ.

ಪ್ರತಿಪಾಲಪುರದಲ್ಲಿ ಸಂಘಶ್ರೀ ಎಂಬ ಬೌದ್ಧಧಾರ್ಮಿಕನಿದ್ದನು. ಅವನಿಗೆ ಪರಮಸುಂದರಿಯಾದ ಕಮಲಶ್ರೀ ಎಂಬ ಮಗಳು. ಕಮಲ ಶ್ರೀಯ ರೂಪವೈಭವದ ಸುದ್ದಿ ಅರಸನ ಕಿವಿಹೊಕ್ಕಿತು. ಅರಸು ಧನದ ಒಂದು ದಿನ ತನ್ನ ಹೆಗ್ಗಡೆಗಳನ್ನು ಸಂಘಶ್ರೀಯ ಮನೆಗೆ ಕಮಲಶ್ರೀ ಯನ್ನು ತನಗೆ ಕೊಡಬೇಕೆಂದು ಕೇಳಿ, ಹೇಳಿ ಕಳುಹಿಸಿದನು. ಅರಸನ ಮಾತಿಗೆ ಸಮ್ಮತಿಸಿ ಸಂಘಶ್ರೀ ಕಮಲಶ್ರೀಯನ್ನು ಅರಸನಿಗೊಪ್ಪಿಸಿದನು.

ತಾನು ಜಿನಧರ್ಮಾವಲಂಬಿಯಾಗಿದ್ದು ಅನ್ಯ ಧರ್ಮಾವಲಂಬಿಯಾದವಳನ್ನು ಮದುವೆಯಾಗಿರುವುದು ನೀತಿವಿರುದ್ಧವೆಂದು ಯೋಚಿಸಿ, ಧನದ ರಾಜನು ಕಮಲಶ್ರೀಗೆ ಆಗಾಗ ಜಿನಧರ್ಮವನ್ನು ಬೋಧಿಸಿ, ಅವಳ ಮನಸ್ಸನ್ನು ಸದ್ಧರ್ಮದ ಕಡೆಗೆ ತಿರುಗಿಸಿದನು. ಅರಸು ಅಷ್ಟಕ್ಕೇ ನಿಲ್ಲಿಸದೆ, ತನ್ನ ಪ್ರಿಯೆಯ ತಂದೆಯನ್ನು ತನ್ನ ಧರ್ಮಕ್ಕೆ ತಿರುಗಿಸಬೇಕೆಂದೂ ಯೋಚಿಸಿದನು.

ಹಾಗೆಯೇ ಧನದ ರಾಜನು ಹಲವು ಬಗೆಯಲ್ಲಿ ತನ್ನ ಮಾವನಿಗೆ ಸದ್ಧರ್ಮವನ್ನು ಉಪದೇಶಿಸಿದರೂ ಅದರಿಂದೇನೂ ಪ್ರಯೋಜನವಾಗಲಿಲ್ಲ; ಹೀಗಿರಲೊಮ್ಮೆ ಪರಮ ತಪೋಧನರಾದ ಚಾರಣ ಋಷಿಗಳು ಆಕಾಶಮಾರ್ಗವಾಗಿ ನಗರದ ಮೇಲೆ ಸಂಚರಿಸುತ್ತಿದ್ದರು. ಅದನ್ನು ಕಂಡು ಧನದ ರಾಜನು ಇದೀಗ ತಪಸ್ಸಿನ ಫಲ; ಸದ್ಧರ್ಮದ ಪ್ರಭಾವ ಎಂದು ಹೇಳುತ್ತಾ ಆಕಾಶಚಾರಿಗಳಾದ ಋಷಿಗಳಿಗೆ ಕೈಮುಗಿದನು. ಇದನ್ನು ನೋಡಿದ ಸಂಘಶ್ರೀಯ ಮನಸ್ಸು ಚಲಿಸಿತು; ಅವನ ಮನಸ್ಸು ಸದ್ಧರ್ಮದ ಕಡೆಗೆ ಒಲಿಯಿತು. ಅಂದಿನಿಂದ ಸಂಘಶ್ರೀ ಧನದ ಮಹಾರಾಜನ ಪರಮಮಿತ್ರನಾಗಿ ಆಸ್ಥಾನದಲ್ಲಿರತೊಡಗಿದನು.

ಒಮ್ಮೆ ಅರಸು ಒಡ್ಡೋಲಗದಲ್ಲಿ ಕುಳಿತಿದ್ದಾಗ ಸಂಘಶ್ರೀ ಅರಸನ ಕುಲಪರಂಪರೆಯನ್ನು ತಿಳಿಯಲು ಅಪೇಕ್ಷಿಸಿದನು. ಆಗ ಅರಸನ ಅಪ್ಪಣೆಯಂತೆ ಹಿರಿಯ ಹೆಗ್ಗಡೆ ಅರಸುಪರಂಪರೆಯನ್ನು ಹೀಗೆ ವಿವರಿಸಿದನು— ವಾಸುಪೂಜ್ಯ ಜಿನರ ತೀರ್ಥಕಾಲದಲ್ಲಿ ನಮ್ಮ ಅರಸನ ಪೂರ್ವಜನಾದ ಇಕ್ಷ್ವಾಕು ವಂಶದ ಯಶೋಧರನೆಂಬ ಅರಸು ಸೌಂದರಿಯೆಂಬ ಅರಸಿಯೊಡನೆ ಚಂಪಾಪುರವನ್ನು ಆಳುತಿದ್ದನು. ಅನಂತವೀರ್ಯ ಪ್ರಿಯಬಲರೆಂಬವರು ಯಶೋಧರ ಸೌಂದರಿಯರ ಸುಪುತ್ರರು.

ಒಮ್ಮೆ ಅರಸು ಯಶೋಧರ ಶತ್ರುಪ್ರದೇಶದಲ್ಲಿಯೂ ಸದ್ಧರ್ಮವನ್ನು ಪ್ರಸರಿಸಬೇಕೆಂಬ ಅಪೇಕ್ಷೆಯಿಂದ ಸೈನ್ಯಸಮೇತನಾಗಿ ಹೊರಟು, ದಿಗ್ವಿಜಯಿಯಾಗಿ, ಮಗಧ ಮಾಳವಾದಿ ದೇಶಗಳನ್ನು ಗೆದ್ದು ಈ ವೆಂಗಿ ಮಂಡಲಕ್ಕೆ ಬಂದನು. ಈ ವೆಂಗಿ ಮಂಡಲದ ಶೋಭಾರಾಶಿಯನ್ನು ಕಂಡು ಅರಸನ ಮನಸೋತಿತು. ಹಾಗೆಯೇ ಅರಸು ಯಶೋಧರ ಇಲ್ಲಿಯೇ ಈ ಪ್ರತಿಪಾಲಪುರವನ್ನು ಕಟ್ಟಿಸಿ ಜಿನಧರ್ಮನಿರತನಾಗಿ ಕಾಲ ಕಳೆಯತೊಡಗಿದನು.

ಒಮ್ಮೆ ಯಶೋಧರ ಮಹಾರಾಜನು ಪರಿವಾರ ಸಮೇತ ಊರ ಹೊರ ನಡೆದನು. ಅವನು ಹಾಗೆ ಹೋಗುವಾಗ ದಾರಿಯಲ್ಲೊಂದು ಮಾವಿನ ಮರ ಸೊಗಸಾಗಿ ಚಿಗುರಿ ನಳನಳಿಸುತಿತ್ತು. ಅರಸು ವಿಹಾರದಿಂದ ಹಿಂದಿರುಗುವಾಗ ಆ ಮಾವಿನ ಮರದ ಚಿಗುರನ್ನೆಲ್ಲಾ ಯಾರೋ ಕತ್ತರಿಸಿ ಹಾಕಿದ್ದರು. ಮರವು ತನ್ನ ಸೊಬಗನ್ನು ಕಳೆದುಕೊಂಡು ಬೋಳಾಗಿ ನಿಂತಿತ್ತು. ಇದನ್ನು ಕಂಡ ಅರಸನ ಮನಸ್ಸು ನೊಂದಿತು. ಎರಡು ಗಳಿಗೆಗಳಿಗೆ ಮೊದಲು ಸೊಗಸಿನ ಬೀಡಾಗಿದ್ದ ಆ ಮರಕ್ಕೆ ಇಂತಹ ಅವಸ್ಥೆ ಒದಗಿತೆಂದರೆ ನರರ ಬಾಳಿನ ಪಾಡೇನು? ಎಂದು ಅರಸು ಯೋಚನಾಪರನಾದನು. ಹಾಗೆ ಆ ಯೋಚನೆಯಲ್ಲೇ ಅರಮನೆಯನ್ನು ಸೇರಿದನು.

ಯಶೋಧರ ಮಹಾರಾಜನು ತನ್ನ ಹಿರಿಯ ಮಗನನ್ನು ಕರೆದು ತಾನಿನ್ನು ರಾಜ್ಯದಲ್ಲಿ ನಿಲ್ಲುವುದಿಲ್ಲವೆಂದೂ, ತಪಸ್ಸಿಗೆ ನಡೆಯುವೆನೆಂದೂ, ಆದುದರಿಂದ ಅವನು ರಾಜ್ಯಭಾರವನ್ನು ವಹಿಸಬೇಕೆಂದೂ ಕೇಳಿಕೊಂಡನು. ಅದಕ್ಕೆ ಹಿರಿಯ ಮಗನು ತನಗೂ ತಪಸ್ಸಿಗೆ ಬರುವ ಯೋಚನೆಯಿದೆಯೆಂದೂ, ಆದುದರಿಂದ ತನಗೆ ರಾಜ್ಯಭಾರದ ಗೊಡವೆ ಬೇಡವೆಂದೂ ರಾಜ್ಯಭಾರವನ್ನು ನಿರಾಕರಿಸಿದನು. ಆ ಮೇಲೆ ಅರಸು ಎರಡನೆಯ ಮಗನನ್ನು ಕರೆದು ಕೇಳಲು ಅವನು ಮೊದಲನೆಯ ಮಗನಂತೆಯೇ ನಿರಾಕರಿಸಿದನು. ಅನಂತರ ಮೂರನೆಯ ಮಗ ಪ್ರಿಯಬಂಧು ಕುಮಾರನಿಗೆ ರಾಜ್ಯವನ್ನೊಪ್ಪಿಸಿ, ತನ್ನ ಇಬ್ಬರು ಮಕ್ಕಳೊಡನೆ ಮನೆ ಬಿಟ್ಟು, ವಿಶ್ವಸೇನಾಚಾರ್ಯರ ಬಳಿ ಸೇರಿ ದೀಕ್ಷೆಪಡೆದನು. ತಪಸ್ವಿಯಾಗಿ ಶ್ರೀಧರ ಮುನಿಯೆಂಬ ಹೆಸರಿನಿಂದ ಪ್ರಸಿದ್ಧಿ ಪಡೆದನು.

ಒಮ್ಮೆ ವಸಂತ ಋತುವಿನಲ್ಲಿ ದೇಶಸಂಚಾರ ಮಾಡುತ್ತ ಯಶೋಧರ ಮುನಿ ಪ್ರತಿಪಾಲನ ಪುರದ ಬಳಿಯ ಜಟಾಶಿಖರವೆಂಬ ಪರ್ವತದಲ್ಲಿ ಬಂದಿಳಿದರು. ಅದೇ ಕಾಲದಲ್ಲಿ ಜಲವಿಹಾರಕ್ಕಾಗಿ ಹೋಗಿದ್ದ ಪ್ರತಿಪಾಲನ ಪುರದ ಅರಸು ಪ್ರಿಯಬಂಧು ರಾಜನನ್ನು ಒಂದು ಸರ್ಪ ಕಡಿಯಿತು. ಅರಸು ತಾನು ಇನ್ನು ಬದುಕುವುದಿಲ್ಲವೆಂದು ಯೋಚಿಸಿ ಜಿನಭಜನೆ ಮಾಡುತ್ತ ವಿಷವೇರಿ ಪ್ರಾಣ ಬಿಟ್ಟನು. ಆಗ ಅಲ್ಲೇ ಇದ್ದ ಮಂತ್ರಿ ಇಂದ್ರಪ್ರಭನು ಅರಸು ಸತ್ತ ಸುದ್ದಿ ಊರಲ್ಲಿ ಹಬ್ಬಿದರೆ ಅನರ್ಥವಾಗುವುದೆಂದು ಚಿಂತಿಸಿ, ಅರಸು ಸತ್ತ ಸುದ್ದಿಯನ್ನು ಗುಟ್ಟಾಗಿರಿಸಿ, ಅರಸನನ್ನು ಅರಮನೆಗೆ ಗುಟ್ಟಿನಲ್ಲಿ ರಾತ್ರಿಕಾಲದಲ್ಲಿ ತಂದು ಆಗಬೇಕಾದ ಸಂಸ್ಕಾರಗಳನ್ನೆಲ್ಲಾ ಮಾಡಿಬಿಟ್ಟನು.

ಮರುದಿನ ಮಂತ್ರಿ ತನ್ನ ಮಗನೊಡನೆ ಅರಮನೆಯನ್ನು ನೋಡಿಕೊಳ್ಳಲು ಹೇಳಿ, ತಾನು ಅರಸನ ಅಪ್ಪಣೆಯಂತೆ ದಿಗ್ವಿಜಯಕ್ಕೆ ಹೊರಡುವೆನೆಂದು ಡಂಗುರ ಸಾರಿಸಿ, ಸೈನ್ಯ ಸಮೇತನಾಗಿ ಅರಮನೆಯಿಂದ ಹೊರಟು ಜಟಾ ಪರ್ವತದ ಬಳಿ ಬಂದು ಬೀಡು ಬಿಟ್ಟನು. ಮತ್ತು ಕೆಲವೇ ಮಂದಿ ಪರಿಜನರನ್ನು ಕರಕೊಂಡು ಜಟಾಪರ್ವತವನ್ನೇರಿ ಯಶೋಧರ ಮುನಿಯನ್ನು ಕಂಡು ವಂದಿಸಿ ಧರ್ಮಶ್ರವಣ ಮಾಡಿದನು. ಆ ಮೇಲೆ ಮಂತ್ರಿ "ಮುನೀಶ್ವರಾ! ವೆಂಗಿ ಮಂಡಲದ ಹಲವು ಜನರು, ಅವರಲ್ಲಿ ಹೆಚ್ಚಿನವರು ಮುದುಕರು ತಮ್ಮ ದರ್ಶನ ಮಾಡಬೇಕೆಂದು ಬಂದು, ಈ ಪರ್ವತವನ್ನೇರಲಾರದೆ ಕೆಳಗೆ ಪರ್ವತದ ಬುಡದಲ್ಲಿ ಬೀಡು ಬಿಟ್ಟಿರುವರು. ನೀವು ಅವರ ಮೇಲೆ ದಯೆದೋರಿ ನಾಳೆ ಮಧ್ಯಾಹ್ನಕ್ಕೆ ನಮ್ಮಲ್ಲಿಗೆ ಚರಿಗೆಗೆ ಬರಬೇಕೆ"ಂದು ಬೇಡಿಕೊಂಡನು. ಮುನಿಗಳು ಮಂತ್ರಿಯ ಮಾತಿಗೆ ಸಮ್ಮತಿಸಲು, ಮಂತ್ರಿ ಅಪ್ಪಣೆ ಪಡೆದು ಪರ್ವತವಿಳಿದು ಬೀಡಿಗೆಬಂದನು.

ಮರುದಿನ ಮಧ್ಯಾಹ್ನ ಯಶೋಧರ ಮುನಿ ಚರಿಗೆಗೆಂದು ಪರ್ವತವಿಳಿದು ಮಂತ್ರಿಯ ಬೀಡಿಗೆ ಬಂದರು. ಮಂತ್ರಿ ಮುನಿಗಳನ್ನು ವಿನಯಪೂರ್ವಕ ಬರಮಾಡಿಕೊಂಡು ಭಕ್ತಿಪೂರ್ವಕ ಪೂಜಿಸಿ ಮೃಷ್ಟಾನ್ನವನ್ನು ಬಡಿಸಿದನು. ಆದರೆ ಆ ಅನ್ನವನ್ನು ಉಂಡ ಕೂಡಲೇ ನಿದ್ದೆ ಬೀಳುವಂತೆ ಸೊಕ್ಕಿನ ಮದ್ದನ್ನು ಅನ್ನದಲ್ಲಿ ಬೆರಸಿದ್ದನು. ಮುನಿ ಉಂಡುದೇ ತಡ ಅಲ್ಲೇ ಒರಗಿದರು. ಮಂತ್ರಿ ಕೂಡಲೇ ಸೇವಕರನ್ನು ಕರೆದು ಮುನಿಯನ್ನು ಪಲ್ಲಕ್ಕಿಯಲ್ಲಿ ಮಲಗಿಸಿ ಅರಮನೆಗೆ ಕರಕೊಂಡು ಬಂದು, ಅರಸು ಮಂಚದಲ್ಲಿ ಮಲಗಿಸಿದನು. ಮುನಿ ಮದ್ದಿನ ಮದದಲ್ಲಿದ್ದಾಗಲೇ ಅರಸರ ಉಡಿಗೆ ತೊಡಿಗೆಗಳನ್ನು ತೊಡಿಸಿದನು. ಕೆಲ ಹೊತ್ತು ಕಳೆದು ಮುನಿ ಎಚ್ಚರಗೊಂಡು ನೋಡುತ್ತಾರೆ! ತಾನು ಅರಸು ತೊಡವಿನಲ್ಲಿದ್ದಾರೆ! ಇದೇನು? ಮುನಿಗೆ ಕೋಪ ಬಂತು ಮಂತ್ರಿಯೊಡನೆ "ಇದೇನು ಅನಾಹುತ!" ಎಂದು ಕೇಳಿದರು.

"ಪ್ರಭೂ! ಅರಸಿಲ್ಲದೆ ರಾಜ್ಯ ಹಾಳಾಯಿತು. ಅರಸುಮಣೆಗೆ ಒಬ್ಬ ಹಕ್ಕುದಾರರು ಹುಟ್ಟುವ ವರೆಗೆ ರಾಜ್ಯವಾಳಿ" ಎಂದು ಮಂತ್ರಿಪರಿವಾರದವರೆಲ್ಲ ಒಕ್ಕೊರಲಿನಿಂದ ಬೇಡಿಕೊಂಡರು. ಗೂಡಿನಲ್ಲಿ ಬಿದ್ದ ಸಿಂಹದಂತೆ ಬೇರೆ ಉಪಾಯ ಕಾಣದೆ ಮುನಿ ಅರಸೊತ್ತಿಗೆಯನ್ನು ಸ್ವೀಕರಿಸಿ ಮೊದಲಿನಂತೆ ತನ್ನ ಮಡದಿಯೊಡನೆ ರಾಜ್ಯವಾಳತೊಡಗಿದರು.

ಕೆಲ ಕಾಲ ಕಳೆದಾಗ ಅರಸು ಶ್ರೀಧರ ಮುನಿಗೆ ತನ್ನ ಮಡದಿಯಲ್ಲಿ ಗಂಡುಕೂಸು ಹುಟ್ಟಿತು. ಮಗು ಹುಟ್ಟಿದುದೇ ತಡ! ಮಗನಿಗೆ ಯಶೋಧರ ಕುಮಾರನೆಂದು ಹೆಸರಿಟ್ಟು, ರಾಜ್ಯ ಪಟ್ಟಕಟ್ಟಿ ಅರಸು ಯಶೋಧರ ಮುನಿ ಸಂಸಾರ ಬಿಟ್ಟು ಜಿನದೀಕ್ಷೆಯಾಂತು ತಪಸ್ವಿಯಾಗಿ ಶ್ರೀಪರ್ವತದ ಸಿದ್ಧವಟದ ಮೂಲದಲ್ಲಿ ಮುಕ್ತಿಗೆ ಸಂದರು. ಮುನಿಯು ಕುಲದಲ್ಲಿ ಹುಟ್ಟಿದವರಾದುದ ರಿಂದ ಶ್ರೀಧರ ಮುನಿಯು ಮುಂದಿನ ಪೀಳಿಗೆಗೆ ಮುಂಡಾಯು ವಂಶವೆಂದು ಹೆಸರಾಯಿತು ಎಂದು ಬುದ್ಧಿಸಾಗರ ಮಂತ್ರಿ ಧನದ ರಾಜನ ವಂಶಚರಿತ್ರೆ ಯನ್ನು ವಿವರಿಸಿ ವಿರಮಿಸಿದನು. ಈ ಕತೆಯನ್ನು ಕೇಳಿ ಸಂಘಶ್ರೀಗೆ ಜಿನ ಧರ್ಮದಲ್ಲಿದ್ದ ವಿಶ್ವಾಸ ಮತ್ತಷ್ಟು ದೃಢವಾಯಿತು.

ಒಮ್ಮೆ ಬುದ್ಧಶ್ರೀ ಎಂಬ ಬೌದ್ಧ ಭಿಕ್ಷು ಸಂಘಶ್ರೀಯ ಮನೆಗೆ ಬಂದನು. ಸಂಘಶ್ರೀ ಜಿನಧರ್ಮಾವಲಂಬಿಯಾದುದನ್ನು ಕೇಳಿ ತುಂಬಾ ಬೇಸರಗೊಂಡು ಏನಾದರೂ ಉಪಾಯದಿಂದ ಆತನನ್ನು ಪುನಃ ಬೌದ್ಧ ಧರ್ಮಕ್ಕೆ ತಿರುಗಿಸಬೇಕೆಂದು ಹಲವು ಬಗೆಯ ಮಾತುಗಳಿಂದ ಪ್ರಯತ್ನಿಸಿ ದನು. ಹೇಗೂ ಬುದ್ಧಶ್ರೀಯ ಪ್ರಯತ್ನ ಫಲಿಸಿತು. ಸಂಘಶ್ರೀ ಜಿನ ಧರ್ಮವಿಮುಖನಾಗಿ ಮತ್ತೊಮ್ಮೆ ಬೌದ್ಧ ಧರ್ಮಕ್ಕೆ ಮನಸ್ಸು ತಿರುಗಿಸಿ ದನು. ಬುದ್ಧಶ್ರೀ ತನ್ನ ಪ್ರಯತ್ನ ಫಲಿಸಿತೆಂದು ಸಂತಸಗೊಂಡು ತನ್ನ ದಾರಿ ಹಿಡಿದು ನಡೆದನು.

ತನ್ನ ಮಾವ ಸಂಘಶ್ರೀ ಮಿಥ್ಯಾದೃಷ್ಟಿಯಾದನೆಂಬ ಸುದ್ದಿ ಧನದ ರಾಜನ ಕಿವಿಗೂ ಮುಟ್ಟಿತು. ಅವನು ಸಂಘಶ್ರೀಯನ್ನು ಬಹಳ ವಿನಯ ದಿಂದ ತನ್ನ ಬಳಿಗೆ ಬರಮಾಡಿಕೊಂಡನು. ಮತ್ತೊಮ್ಮೆ ಅವನನ್ನು ಸದ್ಧರ್ಮಕ್ಕೆ ತಿರುಗಿಸಬೇಕೆಂದು ಯತ್ನಿಸಿ, "ಚಾರಣ ಋಷಿಗಳು ಧರ್ಮದ ಮಹಿಮೆಯಿಂದ ಆಕಾಶಚಾರಿಗಳಾಗಿ ಸಂಚರಿಸುವುದನ್ನು ನೋಡಿಲ್ಲವೆ?" ಎಂದು ಕೇಳಿದನು. ಸಂಘಶ್ರೀ ಮಿಥ್ಯಾದೃಷ್ಟಿಯಾಗಿ ತಾನು ಋಷಿಗಳು ಆಕಾಶಚಾರಿಗಳಾಗಿರುವುದನ್ನು ಕಾಣಲೇ ಇಲ್ಲವೆಂದು ಸುಳ್ಳೇ ಹೇಳಿ ಬಿಟ್ಟನು. ಆತನು ಹಾಗೆ ಸುಳ್ಳು ಹೇಳಿದುದೇ ತಡ, ನಗರ ದೇವತೆಗಳು ಬಂದು ಅವನ ಕಣ್ಣುಗಳೆರಡನ್ನೂ ಕುಕ್ಕಿ ತೆಗೆದೇ ಬಿಟ್ಟುವು. ಸುಳ್ಳು ಹೇಳಿದುದರ ಫಲವೇನೆಂದು ಅಲ್ಲಿ ಕೂಡಿದವರಿಗೆಲ್ಲಾ ಪ್ರತ್ಯಕ್ಷವಾಗಿ ತಿಳಿದು ಬಂತು. ಮುಂದೆ ಸಂಘಶ್ರೀಯ ವಂಶದಲ್ಲಿ ಏಳು ತಲೆಗಳ ವರೆಗೂ ಕುರುಡರೇ ಹುಟ್ಟಿದರಂತೆ.

▪▪▪▪▪▪▪▪

Edited, Printed and Published by K. V. Shenoy
at The Prabhat Printers, Ltd., Mangalore-1.